# 'ತುಳುನಾಡಿನಲ್ಲಿ ನಾಗಬ್ರಹ್ಮರ ಪರಿಕಲ್ಪನೆ'

ಕನ್ನಡ ವಿಶ್ವವಿದ್ಯಾಲಯ ಹಂಪಿಯ ಚರಿತ್ರೆ ಅಧ್ಯಯನದ ಎಂ.ಫಿಲ್
ಪದವಿಗಾಗಿ ಅರ್ಪಿಸುವ ನಿಬಂಧ




ಸಂಶೋಧಕರು

ಪ್ರಸನ್ನ


ನೋಂದಣಿ ಸಂಖ್ಯೆ: 151107030055


ಮಾರ್ಗದರ್ಶಕರು

ಡಾ. ಸತೀಶ್ ಕುಮಾರ್ ಶೆಟ್ಟಿ ಪಿ.



2016

ಕರ್ನಾಟಕ ಥಿಯೊಲೋಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು – 575 001




# 'ತುಳುನಾಡಿನಲ್ಲಿ ನಾಗಬ್ರಹ್ಮರ ಪರಿಕಲ್ಪನೆ'

ಕನ್ನಡ ವಿಶ್ವವಿದ್ಯಾಲಯ ಹಂಪಿಯ ಚರಿತ್ರೆ ಅಧ್ಯಯನದ ಎಂ.ಫಿಲ್
ಪದವಿಗಾಗಿ ಅರ್ಪಿಸುವ ನಿಬಂಧ






ಸಂಶೋಧಕರು

**ಪ್ರಸನ್ನ**

ನೊಂದಣಿ ಸಂಖ್ಯೆ:151107030055

ಮಾರ್ಗದರ್ಶಕರು

**ಡಾ| ಸತೀಶ್ ಕುಮಾರ್ ಶೆಟ್ಟಿ ಪಿ**

**2016**

ಕರ್ನಾಟಕ ಥಿಯಲೋಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು – 575 001

# ಯೋಗ್ಯತಾ ಪತ್ರ

ಶ್ರೀ ಪ್ರಸನ್ನರವರು ನನ್ನ ಸಲಹೆ ಮಾರ್ಗದರ್ಶನದಲ್ಲಿ 'ತುಳುನಾಡಿನಲ್ಲಿ ನಾಗಬ್ರಹ್ಮರ ಪರಿಕಲ್ಪನೆ' ಒಂದು ಅಧ್ಯಯನ ಎಂಬ ಶೀರ್ಷಿಕೆಯ ಈ ಮಹಾ ಪ್ರಬಂಧವನ್ನು ಎಂ.ಫಿಲ್. ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿರುತ್ತಾರೆ.

ಈ ಮಹಾ ಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ಕ್ಷೇತ್ರಕಾರ್ಯ, ಅಭಿಪ್ರಾಯ ಸಂಗ್ರಹ, ಸಂದರ್ಶನ ಮತ್ತು ಸಂಶೋಧನೆಯ ಫಲ ಸ್ವರೂಪವಾಗಿದೆ. ಇವರು ಈ ಮಹಾ ಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲ.

**ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ**
**ಬಲ್ಮಠ ಮಂಗಳೂರು – 575001**

**ಡಾ. ಸತೀಶ್ ಕುಮಾರ್ ಶೆಟ್ಟಿ ಪಿ.**
ಸಂಶೋಧನಾ ಮಾರ್ಗದರ್ಶಕರು

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಾದರ ಪಡಿಸುವ "ತುಳುನಾಡಿನಲ್ಲಿ ನಾಗಬ್ರಹ್ಮರ ಪರಿಕಲ್ಪನೆ" ಒಂದು ಅಧ್ಯಯನ ಎಂಬ ಈ ಒಂದು ಶೀರ್ಷಿಕೆಯ ಮಹಾ ಪ್ರಬಂಧವು ನನ್ನ ಸ್ವತಂತ್ರ ಕೃತಿಯಾಗಿದೆ. ಇದು ಸಂಶೋಧನಾ ಪರಿಶ್ರಮ, ವಿಶ್ಲೇಷಣೆ ಮತ್ತು ಸಮಗ್ರ ಅಧ್ಯಯನದ ಫಲೋದಯವಾಗಿದೆ. ಈ ಪ್ರಬಂಧವು ಮಂಗಳೂರಿನ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ಸತೀಶ್ ಕುಮಾರ್ ಶೆಟ್ಟಿ ಪಿ. ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲು ಸಾಧ್ಯವಾಗಿರುತ್ತದೆ. ಈ ಮಹಾ ಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಬಿಡಿಯಾಗಿ ಇಲ್ಲವೇ ಪೂರ್ತಿಯಾಗಿ ಬಳಸಿ ಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ಪ್ರಸನ್ನ
ಸಂಶೋಧಕರು
ಕರ್ನಾಟಕ ಥಿಯೋಲಾಜಿಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು – 575001

# ತುಳುನಾಡಿನಲ್ಲಿ ನಾಗಬ್ರಹ್ಮರ ಪರಿಕಲ್ಪನೆ

## ಅಧ್ಯಾಯಗಳ ವಿವರ

## ಅಧ್ಯಾಯ-1

# ತುಳು ನಾಡಿನಲ್ಲಿ ನಾಗಬ್ರಹ್ಮರ ಪರಿಕಲ್ಪನೆ

**ಪ್ರಸ್ತಾವನೆ:**

ನಾಗರಿಕ ಪೂರ್ವದಲ್ಲಿ ಮಾನವನು ಕೃಷಿ ಸಂಸ್ಕೃತಿಯ ಹಂತಕ್ಕೆ ತಲುಪಿದ್ದು, ನಾಗರಿಕತೆಯ ಇತಿಹಾಸದಲ್ಲಿಯೇ ಅದೊಂದು ಮಹತ್ವದ ಘಟ್ಟ. ಉತ್ತಿದ ತುಂಡು ಭೂಮಿಯು ಅಲೆಮಾರಿಗಳ ಜೀವನವನ್ನೇ ಕಟ್ಟಿಹಾಕಿತ್ತು ಎನ್ನುವುದು ಸಮಾಜಶಾಸ್ತ್ರಜ್ಞರ ಅಭಿಮತ. ಹೀಗೆ ಒಂದು ಕಡೆ ನೆಲೆನಿಂತ ಮೇಲೆ ವ್ಯವಸಾಯಕ್ಕೆ ಬೇಕಾದ ಪರಿಕರಗಳ ಜೊತೆಗೆ ವೃತ್ತಿಪರರೂ ಅಲ್ಲೇ ಸಂಘಟಿತರಾಗುತ್ತಾರೆ. ಮುಂದಕ್ಕೆ ಒಂದು ಕಡೆ ನೆಲೆ ನಿಂತ ಕೃಷಿಕರು, ಕೃಷಿ ಪರಿಕರಗಳ ಪೂರೈಕೆದಾರರೂ ಒಂದು ಸಮುದಾಯವಾಗಿ ಭ್ರಾತೃತ್ವದಿಂದ ಜೀವನ ಪ್ರಾರಂಭಿಸಿದರು. ಇವರಿಗೆ ನಂತರದಲ್ಲಿ ಆಡಳಿತಕ್ಕೆ ಒಬ್ಬ ನಾಯಕ, ದೇವತಾ ಅರ್ಚನೆ, ಕಲೆ, ಮನರಂಜನೆಗೆ ಹೀಗೆ ಮುಂತಾಗಿ ಪರಸ್ಪರ ಹೊಂದಾಣಿಕೆಯನ್ನು ಮಾಡಿಕೊಂಡು ಸಮಾಜವಾಗಿ ಬೆಳೆದು ನಿಲ್ಲಲು ಕಾರಣವಾಯಿತು.

ಈ ತೆರನಾದ ನಾಗರಿಕ ಪೂರ್ವ ಸಮಾಜದ ಲಕ್ಷಣಗಳು ತುಳು ನಾಡಿನಲ್ಲಿ ಕಾಣಸಿಗುತ್ತದೆ. ಒಂದು ಪ್ರದೇಶದಲ್ಲಿ ನೆಲೆನಿಂತು ಪ್ರಕೃತಿಯು ಒಡ್ಡಿದ ಸವಾಲುಗಳನ್ನು ಎದುರಿಸಿ ಮಾನವ ಅತೀತ ಶಕ್ತಿಗಳಿಗೆ ಶರಣಾಗಬೇಕಾಯಿತು. ಇಲ್ಲಿ ಪ್ರಮುಖವಾಗಿ ಭಾರತದ ಅನೇಕ ಭವ್ಯ ದೇವಾಲಯಗಳು ಮೂಲತಃ ಜನಪದರ ಆರಾಧನಾ ಕೇಂದ್ರಗಳಾಗಿದ್ದುವು. ಈ ದೇವಾಲಯಕ್ಕೆ ಕೃಷಿ ಸಂಸ್ಕೃತಿಯ ಹಿನ್ನಲೆಯನ್ನು ಹೊಂದಿದ್ದವು. ಮೊದಲ ಆರಾಧನಾ ಕೇಂದ್ರವೆಂದರೆ ಪ್ರಕೃತಿ ಅಥವಾ ಮರ. ಮುಂದೆ ಕಲ್ಲಿನ ಚಪ್ಪಡಿ, ಮಣ್ಣಿನ ಗೋಡೆಯ, ಹುಲ್ಲಿನ ಮಾಡಿನ ಗುಡಿಯು, ಹೀಗೆ ಅನೇಕ ಸ್ಥಿತ್ಯಾಂತಗಳನ್ನು ಕಂಡು ಕೊಂಡಿದೆ.[1]

ತುಳುನಾಡು ತನ್ನ ವಿಶಿಷ್ಟವಾದ ಆರಾಧನಾ ಕ್ರಮಗಳಿಂದ ಗುರುತಿಸಲ್ಪಡುತ್ತದೆ. ಪುರಾಣ ಪ್ರಸಿದ್ಧವಾದ ದೇವ, ದೇವಿಯರ ಆರಾಧನೆಯೊಂದಿಗೆ ನಾಗ, ಯಕ್ಷ, ಬೆರ್ಮರ ಆರಾಧನೆಯನ್ನು ಸರ್ವ ಸಂಸ್ಕೃತಿಗೆ ಮೈಗೂಡಿಸಿ ಕೊಂಡಿವೆ.

ಬೆರ್ಮರ ಆರಾಧನಾ ಕ್ರಮ ಅಧ್ಯಯನಕ್ಕೆ ಯೋಗ್ಯವಾದ ವಿಷಯವಾಗಿದೆ. ಸಾವಿರಾರು ವರ್ಷಗಳಿಂದ ತುಳುವರಿಂದ ಆರಾಧನೆಗೊಳಪಟ್ಟ ಬೆರ್ಮನ ಬಗ್ಗೆ ಬೇರೆ ಬೇರೆ ವಿದ್ವಾಂಸರು ಸಂಶೋಧನಾ ಲೇಖನಗಳನ್ನು ಬರೆದಿದ್ದರೂ ಯಾರೋಬ್ಬರು ಬೆರ್ಮನ ಮೂಲದ ಬಗ್ಗೆ ಖಚಿತ ನಿರ್ಧಾರಕ್ಕೆ ಬರಲಿಲ್ಲ. ಕೆಲವರು ಆತನನ್ನು ನಾಲ್ಕು ತಲೆಯ ವೈದಿಕ ಬ್ರಹ್ಮನೆಂದು ಕರೆದರೆ, ಇನ್ನು ಕೆಲವರು ವನದೇವತೆ ಎಂದು ಕರೆದರು.[2]

"<u>**ಬೆರ್ಮೆರ್**</u>" ಪದದ ಮೂಲ ರೂಪವಾದ 'ಬಿರ್' ಎಂಬ ಶಬ್ಧವು ದ್ರಾವಿಡ ಮೂಲದಾಗಿದೆ. ಟಿ. ಬರೋ ಮತ್ತು ಎಂ. ಎ. ಎಮಿನ್ಹೋ ಸಂಪಾದಿಸಿದ. ದ್ರಾವಿಡ ಭಾಷೆಯ ಶಬ್ದೋತ್ಪತ್ತಿ ಕೋಶದಲ್ಲಿ ಈ ಪದವು ಉಲ್ಲೇಖಿತವಾಗಿದೆ. ಈ ಶಬ್ಧಕ್ಕೆ ಉದಾಹರಣೆಯಾಗಿ 'ಬಿರ್ಗಾಳಿ' ಎಂಬ ಪದವನ್ನು ಮಾತ್ರವಲ್ಲ ಇತರ ದ್ರಾವಿಡ ಭಾಷೆಗಳಲ್ಲಿ ಈ ಪದಕ್ಕೆ ಸಂವಾದಿಯಾಗಿರುವ ಪದಗಳನ್ನು ಕೊಡಲಾಗಿದೆ.[೩]

ತುಳುವರ ಪ್ರಾಚೀನ ಆರಾಧ್ಯ-ದೈವ ಬೆರ್ಮೆ ಈಗ ಬರಿಯ 'ಬೆರ್ಮೆ' ಅಲ್ಲ ಆತ "ನಾಗ ಬೆರ್ಮೆ". ಬೆರ್ಮೆನೊಂದಿಗೆ ನಾಗ ಹೇಗೆ ಸೇರಿಕೊಂಡ ಎಂಬುದನ್ನು ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ತನ್ನ "ನಾಗ ಬೆರ್ಮೆ" ಎನ್ನು ಪುಸ್ತಕದಲ್ಲಿ ಬರೆದಿರುತ್ತಾರೆ. ನಾಗಾರಾಧನೆ ಬೆರ್ಮೆರ-ಆರಾಧನೆ ಮತ್ತು ನಾಗ ಬೆರ್ಮೆ ಆರಾಧನಾ ಕುರಿತು ಸಾಕಷ್ಟು ಮಾಹಿತಿ ನೀಡಿರುತ್ತಾರೆ.

ಬೆರ್ಮೆನ ಆರಾಧನೆಯು ಪ್ರಸ್ತುತ ಗರೋಡಿಗಳಲ್ಲಿ ಹಾಗೂ ಆಲಡೆಗಳಲ್ಲಿ ನಡೆಯುತ್ತಿದೆ. "ಮೂಡಲಗಟ್ಟದ ರಾಜ್ಯದಿಂದ ಪಡುವಣ ಕಡಲವರೆಗೆ ಉತ್ತರದ ಅಂಕೋಲದಿಂದ ದಕ್ಷಿಣ ಮಂಜೇಶ್ವರದವರೆಗೆ ಗಡಿ ಹಾಕಿದ ಜಾಗ ನಾಗ ಜೆಡೆ ಹಾಕಿದ ಕಲ್ಲು. ಬೆರ್ಮೆರ ಗುಂಡ ಗದ್ದುಗೆಯಿದ್ದಲ್ಲಿ ದೇವಸ್ಯ ದೇವಸ್ಥಾನದಲ್ಲಿ ನಾಲ್ಕು ಕಾಲ ಪರ್ಯಂತ ಬಲಿನೇಮ ಪಡೆದೆ" ಎಂಬುದಾಗಿ ಬೊಬ್ಬರ್ಯ ಪಾಡ್ದಾನದಲ್ಲಿ ಉಲ್ಲೇಖಿತವಾಗಿರುವುದು ಗಮನಾರ್ಹ ಅಂಶವಾಗಿದೆ.[೪]

ತುಳುನಾಡಿನ ಜನಪದ ಸಂಸ್ಕೃತಿಯಲ್ಲಿ ಅಂದಿನ ಈಜಿಪ್ಟ್ ಸಂಸ್ಕೃತಿಯ ಸಾಮ್ಯತೆಗಳನ್ನು ಕಾಣಬಹುದು. ನಾರಾಯಣ ಮತ್ತು ಬೆರ್ಮೆರ ಕಲ್ಪನೆಯಲ್ಲಿ ಸೂರ್ಯ ಮತ್ತು ಬೆರ್ಮೆರ (ಸರ್ಪ) ಏಕತ್ವವನ್ನು ಕಾಣಬಹುದು.

ತುಳುನಾಡಿನ ಅನೇಕ ಕೃಷಿಕ ಕುಟುಂಬದಲ್ಲಿ ನಾಗ ಬೆರ್ಮೆರ ಅಧೀನ ಅನೇಕ ಗದ್ದೆಗಳಿದ್ದು, ಅದರಲ್ಲಿ ವಿಶೇಷವಾಗಿ ಬಾಕಿಮಾರು ಗದ್ದೆಗಳ ಸಾಗುವಳಿ ಮಾಡುವ ಮೊದಲು ನಾಗಬೆರ್ಮೆರ ಮತ್ತು ಸಂಬಂಧಪಟ್ಟ ದೈವಗಳ ಉಪಾಸನೆ ಆಗಬೇಕು. ಆ ರೀತಿ ಆಗದಿದ್ದರೆ ಅನಾಹುತ ಆಗುತ್ತದೆಂಬ ನಂಬಿಕೆ ಜನರ ಮನದಲ್ಲಿ ಗಾಢವಾಗಿ ಬೇರೂರಿವೆ.[೫]

ಬೆರ್ಮೆರ ಆರಾಧನೆಯು ಪ್ರಸ್ತುತ ಗರೋಡಿಗಳು ಮತ್ತು ಆಲಡೆ ಮೂಲತಾನಗಳಲ್ಲಿ ನಡೆಯುತ್ತಿದೆ. ಸಿರಿಪಾಡ್ದನ ಮತ್ತು ಕೋಟಿ ಚೆನ್ನಯ ಪಾಡ್ದನಗಳೆರಡು ತುಳುನಾಡಿನ ಮುಖ್ಯ ಮಹಾಕಾವ್ಯಗಳು ಮೂಲತಾನಗಳ ನಾಗಬಿರ್ಮೆರ್ ಭೂತಗಳ ಅಧಿದೇವತೆಯಾಗಿದ್ದು, ಭೂತಗಳ ಪ್ರಸರಣ ಪಾಡ್ದನಗಳಲ್ಲಿ ದೈವಗಳು ಭೂತಗಳು, ಘಟ್ಟದಿಂದ ಇಳಿದು ಬರುತ್ತದೆ ಅವುಗಳನ್ನು ತಡೆಯುವುದು ಸರ್ಪ ಅಂದರೆ ಸುಬ್ರಹ್ಮಣ್ಯ ಭೂತಗಳು ಘಟ್ಟ ಇಳಿದು ಬರುವುದು ವಾಸ್ತವಕ್ಕೆ ಹೆಚ್ಚು ಹತ್ತಿರವಾಗಿರುತ್ತದೆ. ಘಟ್ಟದ ಕೆಳಭಾಗದಲ್ಲಿ ಹಾವುಗಳು ಹೆಚ್ಚಾಗಿ ಇದ್ದುದನ್ನು ಇದು ಸೂಚಿಸುತ್ತದೆ.

ಮಾನವ ವಾಸಕ್ಕಾಗಿ ಘಟ್ಟ ಇಳಿದು ಕಾಡು ಕಡಿಯಲು ಆರಂಭಸಿದಾಗ ಹಾವುಗಳು ಮಾನವರನ್ನು ಕಚ್ಚಿರಬೇಕು ಅದೇ ಸುಬ್ರಹ್ಮಣ್ಯನ ಪ್ರತಿಭಟನೆ.

ಹೀಗೆ ಸೃಷ್ಠಿಯ ಕಲ್ಪನೆ ವಿಕಾಸವನ್ನು ಜನಪದ ಹಾಡುಗಳು ತುಳು ಪಾಡ್ದನಗಳು ನಮ್ಮ ಮುಂದೆ ತೆರೆದಿಡುತ್ತದೆ. ಈ ಸೃಷ್ಠಿ ಬೆರ್ಮರ ಸೃಷ್ಠಿ ಎಂಬುದಾಗಿ ಪಾಡ್ದನಗಳು ಹೇಳುತ್ತವೆ. ತುಳುನಾಡನ್ನು ಪುರಾಣ ಕಾಲದ ನಾಗ ಲೋಕವೆಂದೂ ನಾಗರ ಖಂಡವೆಂದೂ ಕರೆಯಲಾಗಿದೆ. ಆದುದರಿಂದ ತುಳುವರು ನಾಗ ಮೂಲದವರು. ಆದಿದ್ರಾವಿಡ ಜನಾಂಗಕ್ಕೆ ಸೇರಿದ ಇವರು ನಾಗಾರಾಧಕರು. ಕಾಲ ಕ್ರಮೇಣ ವೈದಿಕ ಆರಾಧನೆಯ ಪ್ರಭಾವದಿಂದ ಸಂಪತ್ತು, ಸ್ಥಾನಮಾನಗಳನ್ನು ಕಳೆದುಕೊಂಡರು. ನಾಗಾರಾಧನೆ, ವೈದಿಕ ಆರಾಧನೆಯಾಗಿ ಪರಿವರ್ತನೆಗೊಂಡಿರುವ ಅಭಿಪ್ರಾಯವನ್ನು ಬಹುತೇಕ ವಿದ್ವಾಂಸರು ವ್ಯಕ್ತಪಡಿಸಿದ್ದಾರೆ.[೬]

ಭೂತಾರಾಧನೆಗೂ ನಾಗಾರಾಧನೆಗೂ ಅನ್ಯೋನ್ಯ ಸಂಬಂಧವಿದೆ. ಭೂತಾರಾಧನೆಯಲ್ಲಿ ನಾಗನ ಹೆಡೆಯ ಚಿಹ್ನೆಯ ಕಿರೀಟವು ನಾಗಾರಾಧನೆಯನ್ನು ಪ್ರತಿನಿಧಿಸುತ್ತದೆ. ಕ್ರಿ.ಶ. ಎರಡನೇಯ ಶತಮಾನದ ಕಾಲದಿಂದ 13ನೇ ಶತಮಾನದ ವರೆಗೆ ತುಳುನಾಡನ್ನು ಆಳಿದ ಆಳುಪ ಅರಸರ ಲಾಂಛನವು ಐದು ಹೆಡೆಯ ನಾಗನ ಚಿಹ್ನೆಯಾಗಿದೆ. ಇದು ನಾಗಾರಾಧನೆಯೂ ಪ್ರಾಚೀನತೆಯ ಬಗ್ಗೆ ಮಹತ್ವದ ಐತಿಹ್ಯವಾಗಿರುವುದು.[೭]

ಭೂತಗಳ ನೇಮ, ಕೋಲಗಳ ಸಂದರ್ಭದಲ್ಲಿ ಆರಾಧನಾ ಸ್ಥಳದಲ್ಲಿ 10 ಕೋಲು ಅಂತರದಲ್ಲಿ ತಾತ್ಕಾಲಿಕ ಬೆರ್ಮರ ಗುಂಡವನ್ನು ಸ್ಥಾಪಿಸುತ್ತೇವೆ. ಬೆರ್ಮರನ್ನು ಪ್ರತಿಷ್ಠಾಪಿಸಿದ ನಂತರವೇ ಭೂತಾರಾಧನೆಯ ಕ್ರಿಯೇ ಪ್ರಾರಂಭವಾಗುತ್ತದೆ. ಇಲ್ಲಿ ಆರಾಧಿಸಲ್ಪಡುವ ಸಾಂಸ್ಕೃತಿಕ ವೀರರಿಗೂ ಬೆರ್ಮರ್ ಆರಾಧ್ಯ ದೈವವಾಗಿದೆ. ಇದು ದ್ರಾವಿಡ ಆರಾಧನಾ ಪದ್ಧತಿಯಾಗಿದ್ದು, ನಂತರದ ಕಾಲಘಟ್ಟದಲ್ಲಿ ವೈದಿಕ ಪದ್ದತಿಯ ಪ್ರವೇಶವನ್ನು ಸೂಚಿಸುತ್ತದೆ.[೮]

ಆರಾಧ್ಯ ದೈವ ಬೆರ್ಮರ್, ಸಂತಾನ ಪ್ರಾಪ್ತಿಗಾಗಿ ಹಾಗೂ ಚರ್ಮ ಸಂಬಂಧವಾದ ಕಾಯಿಲೆಗಳ ನಿವಾರಣೆಗಾಗಿ ಬೆರ್ಮರಿಗೆ ಹರಕೆ ಹೇಳುವ ಸಂಪ್ರದಾಯ ಬಹಳ ಪುರಾತನ ಕಾಲದಿಂದಲೂ ಅಸ್ತಿತ್ವದಲ್ಲಿತ್ತು. ಕೋಟಿ-ಚೆನ್ನಯ ತಾಯಿ ದೇಯಿ ಬೈದ್ಯೆತಿಯು ಕೆಮ್ಮಲಜೆ ಬ್ರಹ್ಮರಿಗೆ ಹರಕೆ ಹೇಳಿಕೊಂಡ ಮೇರೆಗೆ ಅವಳಿ ಮಕ್ಕಳನ್ನು ಪಡೆಯುತ್ತಾಳೆ. ತಾಯಿಯ ಹರಕೆಯನ್ನು ತೀರಿಸಲು ಕೆಮ್ಮಲಜೆ ಬೆರ್ಮ ಸನ್ನಿಧಿಗೆ ಹೋಗುವ ವಿಚಾರ ಪಾಡ್ದನದಲ್ಲಿ ಉಲ್ಲೇಖವಾಗಿದೆ.[೯]

ಸಿರಿಯ ಪಾಡ್ದನದಲ್ಲಿ ಬೆರ್ಮರ ಹರಕೆಯಿಂದ ಸಿರಿಯು ಹುಟ್ಟುತ್ತಾಳೆ ಮುಂದೆ ಬೆರ್ಮ ಆಳ್ವರು ಪಾಳು ಬಿದ್ದ ಬೆರ್ಮರ ಗುಡಿಯನ್ನು ನವೀಕರಿಸಿ ಸೇವೆಗಳನ್ನು ಒಪ್ಪಿಸಿದರೆಂದು ತಿಳಿಯಲಾಗಿದ್ದು ಕಾಂತಬಾರೆ-ಬುದಬಾರೆಯರು ಕರಿಯತ್ಯೆಲಕ್ಕೆ (ಕರಿಯ ಬಿತ್ಲ್) ಬೆರ್ಮರಿಗೆ ಹರಕೆ ತೀರಿಸಲು

ಹೋಗುವ ಉಲ್ಲೇಖ ಪಾಡ್ದನದಲ್ಲಿದೆ. 16ನೇ ಶತಮಾನದ ಇಟೆಲಿಯ ಪ್ರವಾಸಿಗ ಪಿಯತ್ರೋದೆಲ್ಲಾವೆಲ್ಲಿ ಎಂಬಾತ ಉಳ್ಳಾಲದ ರಾಣಿ ಅಬ್ಬಕ್ಕಳನ್ನು ಆಕೆಯ ಮಣೀಲ್‌ನ ಅರಮನೆಯಲ್ಲಿ ಭೇಟಿಯಾಗಿದ್ದು, ಅಲ್ಲಿ ಬೆರ್ಮೆರ ಗುಡಿ ಹಾಗೂ ವಿಗ್ರಹ ಇತ್ತೆಂದು ಉಲ್ಲೇಖಿಸಿದ್ದಾನೆ.[೧೦] ಬೆರ್ಮೆರನ್ನು 'ಬ್ರೆಮೋರ್' (Bramor) ಎಂಬ ಸಂಬೋದಿಸಿ ಇದು ಬಹಳ ದೊಡ್ಡ ಪ್ರಭಾವಶಾಲಿ ಶಕ್ತಿಯಾಗಿದ್ದು ಸಾವಿರಾರು ಭೂತಗಳಿಗೆ ಒಡೆಯನಾಗಿರುವ ಸಾಧ್ಯತೆಯನ್ನು ವ್ಯಕ್ತಪಡಿಸುತ್ತದೆ.

ಬನ್ನಂಜೆ ಬಾಬು ಅಮೀನ್ ಹಾಗು ಮೋಹನ ಕೋಟ್ಯಾನ್ ಬರೆದ "ತುಳುನಾಡಿನ ಗರೋಡಿಗಳ ಸಾಂಸ್ಕೃತಿಕ ಅಧ್ಯಯನ" ಗರೋಡಿಗಳಲ್ಲಿ ಬೆರ್ಮೆರ ಆರಾಧನೆ ಹೇಗೆ ನಡೆಯುತ್ತದೆ ಎಂಬಿತ್ಯಾದಿ ವಿಚಾರಗಳ ಬಗ್ಗೆ ಉಲ್ಲೇಖವಿದೆ. ಶ್ರೀಮತಿ ಇಂದಿರಾ ಹೆಗ್ಗಡೆಯವರು ಬರೆದ "ಬಂಟರು ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ ಕೃತಿಯು ತುಳುವರ ಮೂಲತಾನ ಆದಿ ಆಲಡೆ ಪರಂಪರೆ ಮತ್ತು ಪರಿವರ್ತನೆ, ಬೆರ್ಮೆರ ಆರಾಧನೆ ಆಲಡೆಯಲ್ಲಿ ಹೇಗೆ ನೆಡಯುತ್ತದೆ ಎಂಬ ಮಾಹಿತಿ ನೀಡುತ್ತದೆ. ಪ್ರೊ. ಅಮೃತ ಸೋಮೇಶ್ವರ ಸಂಪಾದಿಸಿದ 'ಸಿರಿ ಪಾಡ್ದನ' ಹಾಗೂ ಶ್ರೀ ದಾಮೋದರ ಕಲ್ಮಾಡಿಯವರು ಸಂಪಾದಿಸಿದ 'ಕೋಟಿ–ಚೆನ್ನಯ' ಪಾಡ್ದನದಿಂದ ಬೆರ್ಮೆರ ಬಗ್ಗೆ ಮಾಹಿತಿ ದೊರೆಯುತ್ತದೆ.

ಬೆರ್ಮೆನ ತಾನ, ಆಲಯ, ಆಲಡೆಗಳು ನಿರ್ಮಾಣಗೊಂಡವು. ವೈದಿಕ ಧರ್ಮದ ಪ್ರಭಾವದ ಮುಂದೆ ಕಾಲಾಂತರದಲ್ಲಿ ಬೆರ್ಮೆರ ಜನಪ್ರಿಯತೆಯು ಗೌಣವಾಯಿತು. ಆತನ ಬಲಿಷ್ಠತೆಯನ್ನು ಹೆಚ್ಚಿಸಲು ನಾಗನೊಂದಿಗೆ ಸಮೀಕರಿಸಲಾಯಿತು. ಹೀಗೆ ಬೆರ್ಮೆನು ನಾಗ ಬೆರ್ಮೆನಾದ. ಸಂಸ್ಕೃತಾನುಕರಣೆಯಿಂದ ನಾಗ ಬ್ರಹ್ಮನೆಂದು ಕರೆಯಲ್ಪಟ್ಟು. ವೈದಿಕ ಸಂಸ್ಕೃತಿಯ ಚೌಕಟ್ಟಿನೊಳಗೆ ಸೇರಿ ಹೋದನೆಂದು ತಿಳಿದು ಬರುತ್ತದೆ.



ತುಳುನಾಡಿನ ಗರೊಡಿಗಳಲ್ಲಿ ಆರಾಧಿಸಲ್ಪಡುವ ಬ್ರಹ್ಮದೇವರು (ಬೆಮ್ಮೆರ್)
ಪ್ರಭಾವಳಿಯ ವಿನ್ಯಾಸದೊಂದಿಗೆ.



ಕಣಾಲ್ ಗರೊಡಿಯಲ್ಲಿರುವ ಅಶ್ವಾರೂಢನಾದ ವೀರಭಂಗಿಯ ಬ್ರಹ್ಮನ ಬೆಳ್ಳಿಯ ಮೂರ್ತಿ

## ಸಂದರ್ಭ ಸೂಚಿ:

೧. ಡಾ॥ ಇಂದಿರಾ ಹೆಗ್ಗಡೆ, ತುಳುವರ ಮೂಲತಾನ ಆದಿ ಆಲಡೆ, ಪರಂಪರೆ ಮತ್ತು ಪರಿವರ್ತನೆ, ಪುಟ – ೧೬.

೨. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ನಾಗಬೆರ್ಮೆ ಪುಟ – ೪,

೩. ಅದೇ ಪುಟ – ೧

೪. ಡಾ। ಇಂದಿರಾ ಹೆಗ್ಗಡೆ, ತುಳುವರ ಮೂಲತಾನ ಆದಿ ಆಲಡೆ, ಪರಂಪರೆ ಮತ್ತು ಪರಿವರ್ತನೆ, ಪುಟ – ೨೦

೫. ಅದೇ ಪುಟ – ೩೦

೬. ಅದೇ ಪುಟ – ೩೦

೭. ರಮಾನಾಥ ಕೋಟೆಕಾರ್, ತುಳುನಾಡಿನ ಬಿಲ್ಲವರು ಒಂದು ಅಧ್ಯಯನ, ಪುಟ – ೭೫

೮. ಅದೇ ಪುಟ – ೭೬

೯. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್, ನಾಗಬೆರ್ಮೆ ಪುಟ – ೧೦೮

೧೦. ರಮಾನಾಥ ಕೋಟೆಕಾರ್, ತುಳುನಾಡಿನ ಬಿಲ್ಲವರು ಒಂದು ಅಧ್ಯಯನ, ಪುಟ – ೭೬.

**********

ಅಧ್ಯಾಯ–2

# ನಾಗಬ್ರಹ್ಮರ ಸ್ವರೂಪ ಅಧ್ಯಯನ ವ್ಯಾಪ್ತಿ ಮತ್ತು ಆಕರಗಳು

ವೈವಿಧ್ಯತೆಗಳಿಂದ ಕೂಡಿರುವ ತುಳುನಾಡಿನ ಸಂಸ್ಕೃತಿಯು ಒಂದು ಮಿಶ್ರ ಸಂಸ್ಕೃತಿಯಂತೆ ಭಾಸವಾಗುತ್ತದೆ. ಇಲ್ಲಿ ಐದು ಸಾವಿರ ವರ್ಷಗಳಷ್ಟು ಹಿಂದಿನಿಂದ ನಡೆದುಕೊಂಡು ಬಂದ ದ್ರಾವಿಡ ಸಂಸ್ಕೃತಿಯೂ ಇದೆ. ಬ್ರಿಟಿಷರ ಆಡಳಿತದ ಪ್ರಭಾವದಿಂದಾಗಿರುವ ಯೂರೋಪಿನ ಸಂಸ್ಕೃತಿಯು ಇದರ ಮೇಲಾಗಿದೆ. ಇಲ್ಲಿನ ಪ್ರಧಾನ ಮೂಲ ಸಂಸ್ಕೃತಿಯನ್ನು ತೆರೆದು ನೋಡಿದಾಗ ವೈದಿಕ ಅವೈದಿಕ, ಬೌದ್ಧ, ಜೈನ ಸಂಸ್ಕೃತಿಗಳೆಲ್ಲವೂ ಎಳೆಎಳೆಯಾಗಿ ಅನಾವರಣಗೊಳ್ಳುತ್ತಿದೆ. ಯಾವ ಸಂಸ್ಕೃತಿಗಳು ಬಂದು ಇಲ್ಲಿನವರನ್ನು ಅಕ್ರಮಿಸಿಕೊಳ್ಳಲು ಪ್ರಯತ್ನಿಸಿದರೂ ಕೂಡಾ ಇಲ್ಲಿನ ಮೂಲ ಜನಾಂಗ ತಮ್ಮ ಮೂಲ ಸಂಸ್ಕೃತಿಯನ್ನು ಬಿಟ್ಟು ಕೊಡುವುದಿಲ್ಲವೆಂಬುದು ಈ ಮೂಲಕ ಸ್ಪಷ್ಟವಾಗುತ್ತದೆ. ಇದಕ್ಕೆ ಇಲ್ಲಿ ಈಗಲೂ ರೂಢಿಯಲ್ಲಿರುವ ನಾಗಾರಾಧನೆ, ಯಕ್ಷಾರಾಧನೆ, ಭೂತಾರಾಧನೆಗಳೇ ಸಾಕ್ಷಿಯಾಗುತ್ತದೆ. ತುಳುನಾಡಿನ ಮೂಲನಿವಾಸಿಗಳನ್ನು ದ್ರಾವಿಡರು ಎಂಬುದಾಗಿ ಸಮಾಜಶಾಸ್ತ್ರರೆಲ್ಲರೂ ಒಪ್ಪುತ್ತಾರೆ.[1]

ತುಳುನಾಡನ್ನು ಪುರಾಣ ಕಾಲದ ನಾಗರ ಲೋಕವೆಂದು ನಾಗರ ಖಂಡವೆಂದು ಕರೆಯಲಾಗಿದೆ. ಆದುದರಿಂದ ತುಳುವರು ನಾಗಮೂಲದವರು ಆದಿದ್ರಾವಿಡ ಜನಾಂಗಕ್ಕೆ ಸೇರಿದ ಇವರು ನಾಗಾರಾಧಕರು ಕಾಲಕ್ರಮೇಣ ಇವರು ತಮ್ಮ ಅಧಿಕಾರ ಸಂಪತ್ತು ಸ್ಥಾನ–ಮಾನಗಳನ್ನು ಕಳೆದುಕೊಂಡು ಶಿಷ್ಠ ಆರಾಧನೆಗೆ ತಲೆಬಾಗಿ ನಾಗಾರಾಧನೆಯಿಂದ ವಿಮುಖರಾದರು ಎನ್ನುವುದು ಸತ್ಯ. ತುಳುವ ಸಂಪ್ರದಾಯವನ್ನು ಆಚರಿಸುವ ಮಾತೃವಂಶೀಯ ತುಳುವ ಬುಡಕಟ್ಟು ಸಮುದಾಯಗಳು ಈ ಮೂಲತಾನದ 'ಅಧ್ಯಯನ ವ್ಯಾಪ್ತಿಗೆ ಬರುತ್ತದೆ. ನಾಗಬನಗಳು ಅಥವಾ ಆಲಡೆಗಳು ಗರೋಡಿಗಳು ಪ್ರಮುಖ ಆರಾಧನಾ ಕೇಂದ್ರಗಳಾಗಿ ಗುರುತಿಸಲ್ಪಡುತ್ತದೆ.[2]

ಲೆಕ್ಕೆಸಿರಿ ಕೋಲದಲ್ಲಿ ದೈವದ ಕಲಾವಿದ ಅರದಳ (ಬಣ್ಣ) ಹಾಕುವಾಗ ಹಾಡುವ ಪಾಡ್ದನದ ಒಂದು ಚರಣವನ್ನು ಶೀನಪ್ಪ ಹೆಗ್ಗಡೆಯವರ ಸಂಗ್ರಹಣದಲ್ಲಿ ತುಳುವರ ಮೂತಾನ "ಆದಿ ಆಲಡೆ" ಪರಂಪರೆ ಮತ್ತು ಪರಿವರ್ತನೆ, ಡಾ। ಇಂದಿರಾ ಹೆಗ್ಗಡೆಯವರು ತನ್ನ ಪುಸ್ತಕದಲ್ಲಿ ಉಲ್ಲೇಖ ಮಾಡಿದ್ದಾರೆ. "ಬಡಗು ಗಂಗೆಯಿಂದ ತೆಂಕು ರಾಮೇಶ್ವರದವರೆಗೆ ಮೂಡಲ ಕಾವೇರಿ ಘಟ್ಟದಿಂದ ಪಡುವಲ ಹೊರಳು ಮರಳಿನವರೆಗೆ ಕಟ್ಟಿದ ಮನೆ ತೆರೆದ ಬಾಗಿಲು ನಾಗಜೆಡೆ ಪಾಡಿಯಲ್ಲಿ ಬೆರ್ಮರ ಗುಂಡ ಗದ್ದಿಗೆಯ ಬಳಿ ಬಲಿನೇಮ ಪಡೆಯುವ ದೈವಗಳು ನಾವು". ತುಳುವರ ಕುಲದೈವವಾಗಿ ಇಂದಿಗೂ ಪೂಜೆಗೊಳ್ಳುತ್ತಿರುವ "ಬಿರ್ಮೆರೆ" ದೈವದ ಪ್ರಾದೇಶಿಕ ವ್ಯಾಪ್ತಿಯನ್ನು ತಿಳಿಸುತ್ತಾ "ಮೂಡಲಗಟ್ಟದ ರಾಜ್ಯದಿಂದ ಪಡುವಣ ಕಡಲವರೆಗೆ ಉತ್ತರದ ಅಂಕೋಲದಿಂದ ದಕ್ಷಿಣದ ಮಂಜೇಶ್ವರದವರೆಗೆ ಗಡಿ ಹಾಕಿದ ಜಾಗ ನಾಗ ಜೆಡೆ (ಹೆಡೆ), ಹಾಕಿದ ಕಲ್ಲು ಬೆರ್ಮರ ಗುಂಡ

ಗದ್ದುಗೆಯಿದ್ದಲ್ಲಿ ದೇವಸ್ಯ ದೇವಸ್ಥಾನದಲ್ಲಿ ನಾಲ್ಕು ಕಾಲ ಪ್ರಪಂಚ ಬಲಿನೇಮ ಪಡೆದೆ" ಎಂಬುದಾಗಿ ಬೊಬ್ಬರ್ಯ ಪಾಡ್ದನದಲ್ಲಿ ಉಲ್ಲೇಖಿಸಲಾಗಿದೆ.[೩] ಅನಾದಿ ಕಾಲದಿಂದ ತುಳುನಾಡಿನ ಜನರು ನಂಬಿಕೊಂಡು ಬಂದಿರುವ ದೈವವೆಂದರೆ ಬಿರ್ಮರ್. ಬೆರ್ಮರ್ ಅಥವಾ ಬೆಮ್ಮರ್ ತುಳುನಾಡಿನ ಅನೇಕ ಕಡೆ ಬೆರ್ಮರಿಗೆ ಗುಡಿ, ಆಲಯಗಳಿವೆ. ತುಳು ಜಾನಪದದಲ್ಲಿ ಪಾಡ್ದನಗಳಲ್ಲಿ ಈ ದೈವದ ಉಲ್ಲೇಖಗಳು ಕಂಡು ಬರುತ್ತದೆ. ತುಳುವರ ಮೌಖಿಕ ಮಹಾಕಾವ್ಯಗಳಾದ ಅಕ್ಕೆರಸು, ಸಿರಿ ಮತ್ತು ಕೋಟಿ–ಚೆನ್ನಯ ಪಾಡ್ದನಗಳಲ್ಲಿ ಬೆರ್ಮನ ಕುರಿತು ವಿಶೇಷ ಮಾಹಿತಿಗಳು ದೊರೆಯುತ್ತದೆ. ಭೂತಾರಾಧನೆಗೆ ಪ್ರಸಿದ್ಧಿ ಪಡೆದ ತುಳುನಾಡಿನಲ್ಲಿ ಜನರು ಸಾಮಾನ್ಯವಾಗಿ ಬೆರ್ಮನನ್ನು ಒಂದು ವಿಶೇಷ ಶಕ್ತಿಯಾಗಿ ಭೂತವೆಂದೆ ಪರಿಗಣಿಸಿದ್ದಾರೆ. ಅದರೆ ಬೆರ್ಮ ಭೂತವಲ್ಲ ಅನೇಕ ಗುಡಿಗಳಲ್ಲಿ ಬೆರ್ಮನು ಭೂತಗಳಿಗೆ ಒಡೆಯನಾಗಿ ಕಂಡು ಬರುತ್ತಾನೆ. ಪೂರ್ವದಲ್ಲಿ ಬೆರ್ಮನಿಗೆ ಕೋಲ ನಡೆಸುವ ಪದ್ಧತಿ ಇರಲಿಲ್ಲ. ಆದರೆ ಇತ್ತೀಚೆಗೆ ದಿನಗಳಲ್ಲಿ ಬೆರ್ಮನನ್ನು ನಾಗನೊಂದಿಗೆ ಸಮೀಕರಿಸಿ ನಾಗಬೆರ್ಮನಿಗೆ ಕೋಲವನ್ನು ನಡೆಸಲಾಗುತ್ತದೆ.[೪]

ತುಳುನಾಡಿನ ಆದಿಕಾಲದ ಆರಾಧ್ಯ ದೈವ "ಬೆರ್ಮನಾದ ಕೊನೆಗೆ ನಾಗಬ್ರಹ್ಮನಾದ. ತುಳುವರು ಬೆರ್ಮನಿಗೆ ಗುಡಿ ಕಟ್ಟಿಸಿದರು. ಇದನ್ನು ಉತ್ತರ ಭಾರತದಲ್ಲಿ ತಾನ ಆಲಯವೆಂದು ಕರೆಯುತ್ತಿದ್ದರು. ಇಲ್ಲಿ ಬೆರ್ಮರ ಗುಡಿಗಳು ಬೆರ್ಮರ ಗುಂಡ (ಗರ್ಭಗುಡಿ) ಬೆರ್ಮನ ತಾನ, ಬೆರ್ಮರ ಆಲಡೆ (ಆಲಯ) ಎಂದು ಕರೆಯಲ್ಪಟ್ಟಿತು. ಭೂತ, ನಾಗರು, ಬೆರ್ಮನ ಪರಿವಾರದೊಳಗೆ ಸೇರಿದರು. ಹೀಗೆ ಇಂದು ಆಲಡೆಗಳಲ್ಲಿ ಬೆರ್ಮನಿಗೆ ಶೌರ್ಯವಂತ, ಅಭಿವೃದ್ಧಿಯನ್ನುಂಟು ಮಾಡುವವ, ಸೃಷ್ಟಿಕರ್ತ ಎಂಬ ಅರ್ಥಗಳನ್ನು ನೀಡಬಹುದು. ಈ ಅರ್ಥಗಳಿಗೆ ಅನ್ಯಾಯವಾಗದಂತೆ ಬೆರ್ಮನ ಮೂರ್ತಿ ನಿರ್ಮಾಣ ಮಾಡಲಾಯಿತು. ಬೆರ್ಮನಿಗೆ ಕುದುರೆಯನ್ನು ವಾಹನವಾಗಿ ನೀಡಲಾಯಿತು. ಹೀಗೆ ಆತ ಆಶ್ವರೂಢನಾದ, ಕೈಯಲ್ಲಿ ಖಡ್ಗ, ತಲೆಗೆ ಕಿರೀಟ, ಭುಜಕೀರ್ತಿ, ಎದೆ, ಕವಚ ಇತ್ಯಾದಿ ಅಲಂಕಾರ ಸಾಧನೆಗಳಿಂದ ಬೆರ್ಮನನ್ನು ಮೂರ್ತರೂಪಕ್ಕೆ ಇಳಿಸಿ ಶೌರ್ಯವಂತನನ್ನಾಗಿ ಬಿಂಬಿಸಲಾಯಿತು.[೫]

ತುಳುನಾಡಿನಲ್ಲಿ ಅನಾದಿ ಕಾಲದಿಂದಲೂ ನಾಗಾರಾಧನೆ ರೂಢಿಯಲ್ಲಿತ್ತು. ನಂತರ ಯಕ್ಷಾರಾಧನೆಯ ಪ್ರಭಾವದಿಂದ ಬೆರ್ಮರ ಆರಾಧನೆ ಪ್ರಾರಂಭವಾಯಿತು. ಬೆರ್ಮನ ಆರಾಧನೆ ಸಾರ್ವತ್ರಿಕಗೊಳಿಸಲೂ ನಾಗ ಆರಾಧನೆ ಎಲ್ಲಿ ಮರೆಯಾಗುತ್ತದೋ ಎಂದು ಬಗೆದ ಇಲ್ಲಿನ ಜನರು ಯಕ್ಷರಾಜನಾದ ಬೆರ್ಮನ ಹಿಂದೆ ಒಂದು ನಾಗನ ಹೆಡೆಯ ಪ್ರಭಾವಳಿ ಜೋಡಿಸಿದ್ದು, ಬಿರ್ಮನನ್ನು ನಾಗಬಿರ್ಮನನ್ನಾಗಿ ಮಾಡಿದರು ಎನ್ನಬಹುದು. ನಾಗನಿಗೂ–ಬಿರ್ಮನಿಗೂ ಏಕಕಾಲದಲ್ಲಿ ಆರಾಧನೆ ನಡೆಯುವಂತೆ ಮಾಡುವ ಮೂಲಕ ಭಕ್ತ ಸಂತುಷ್ಟರಾದರು. ಅಲ್ಲದೆ ಈ ರೀತಿಯ ಸಂಸ್ಕೃತಾನುರೂಪ ಪರಿಣಾಮವಾಗಿ ನಾಗಬೆರ್ಮನು ನಾಗಬ್ರಹ್ಮನಾದನು.[೬] ಹಲವು ಕಡೆಗಳಲ್ಲಿ ಬೆರ್ಮನ ಅಕ್ಕಪಕ್ಕದಲ್ಲಿ ನಾಗಕನ್ನಿಕೆಯರು ನಿಂತಿರುವ ಶಿಲ್ಪಗಳನ್ನು ಕಾಣಬಹುದು. ಆದರೆ, ಹೆಚ್ಚಿನ ಚಿತ್ರಗಳೆಲ್ಲವೂ ಬೆರ್ಮನೇ

ಪ್ರಧಾನ ದೇವತೆಯಾಗಿದ್ದಾನೆ ಎಂದು ತಿಳಿಯುತ್ತದೆ. ಬೆರ್ಮನು ತುಳುನಾಡಿನ ರಾಜ ಮನೆತನದವರ ಅರಾಧ್ಯ ದೇವತೆ ಆಗಿರುವುದರಿಂದಲೂ ಅವನು ರಾಜನ ರೂಪ, ಅಲಂಕಾರ ಮತ್ತು ತುಳುನಾಡಿನ ಮೌಖಿಕ ಮಹಾಕಾವ್ಯಗಳಲ್ಲೊಂದಾದ ಸಿರಿಪಾಡ್ದನದ ಕತೆಯಲ್ಲಿ ಮೂಲಪುರುಷ ಬಿರುಮಾಳ್ವ ವೃದಾಪ್ಯಕ್ಕೆ ಮುಟ್ಟುತ್ತಾನೆ. ಆ ಹೊತ್ತಿಗೆ ಆತ ತನ್ನ ಕುಲದೇವರಾದ ಬಿರ್ಮನನ್ನು ಸ್ಮರಿಸಿಕೊಳ್ಳುತ್ತಾನೆ. ಬೆರ್ಮನು ಬ್ರಾಹ್ಮಣ ವೇಷದಲ್ಲಿ ಆಳ್ವನ ಅರಮನೆಯ ಮುಂದೆ ಬಂದು ನಿಲ್ಲುತ್ತಾನೆ.[೭] ಬ್ರಾಹ್ಮಣನ ರೂಪ ತಾಳಿ ಬಂದ ಬೆರ್ಮ ಬಿರುಮಾಳ್ವನಿಗೆ ಅಭಯ ನೀಡುತ್ತಾನೆ. ಇಷ್ಟು ಕೇಳಿದ ಬಿರುಮಾಳ್ಯ ಬ್ರಾಹ್ಮಣನಿಂದ ಪಡೆದ ಪಿಂಗಾರದ ಹಾಳೆಯನ್ನು ಮದ್ಯದ ಕೋಣೆಗೆ ತಂದರು. ಅಲ್ಲಿ ಸಿಕ್ಕದಲ್ಲಿದ್ದ ಕಲಶದಲ್ಲಿ ಹಾಕಿದರು. ಮಧ್ಯರಾತ್ರಿ ಕಳೆದ ಮುಂಜಾನೆಯ ಹೊತ್ತಿನದಲ್ಲಿ ಮಂಗಳವಾದ ಸಿಂಹರಾಶಿಯ ಆಮಾವಾಸೆಯ ಹೊತ್ತು ಬೆರ್ಮ ದೇವರ ಸಿರಿಪಾದದಿಂದ ಹಿಂಗಾರದ ಹಾಳೆ ಒಡೆದು ಅದರ ಮೇಲಿಟ್ಟಿದ ಗಂಧದ ಉಂಡೆಯಿಂದ ಹೆಣ್ಣುಮಗುವೊಂದು ಜನಿಸಿತು. ಈ ಮಗುವಿಗೆ ಅಜ್ಜರು ‘ಸಿರಿ’ ಎಂಬ ನಾಮಕರಣ ಮಾಡಿದರು. ನಾಗಬೆರ್ಮನ ವರಪ್ರಸಾದದಿಂದ ಸಿರಿಯು ಉದಿಸಿ ಬಂದಳು ಈ ಮೂಲಕ ತುಳುನಾಡಿನ ಬಿರ್ಮನ ಬಗ್ಗೆ ಜನರಿಗಿದ್ದ ನಂಬಿಕೆ ಮತ್ತು ಯಕ್ಷ ಸಂಸ್ಕೃತಿ ಎಷ್ಟು ಪ್ರಭಾವಶಾಲಿಯಾಗಿತ್ತು ಎಂಬುದನ್ನು ತೋರಿಸಿಕೊಡುತ್ತದೆ. ಈ ಮಾಹಿತಿಯನ್ನು ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ತನ್ನ “ನಾಗ ಬೆರ್ಮ” ಎಂಬ ಪುಸ್ತಕದಲ್ಲಿ ಉಲ್ಲೇಖಿಸುತ್ತದೆ.

ಬಡಗು ಗಂಗೆಯಿಂದ ತೆಂಕು ರಾಮೇಶ್ವರದವರೆಗೆ ಅರಸು ದೈವ ಬೆರ್ಮರು ತನ್ನ ಅಧಿಕಾರ ವ್ಯಾಪ್ತಿಯನ್ನು ಹೊಂದಿದರು ಎಂಬ ಉಲ್ಲೇಖ ಲೆಕ್ಕೆಸಿರಿ ಪಾಡ್ದನದಲ್ಲಿದೆ. ಇಡೀ ಭಾರತ ಖಂಡದಲ್ಲೆಲ್ಲಾ ಈ ಬೆರ್ಮರು ಆರಾಧನೆಗೆ ಒಳಗಾಗಿದ್ದರು ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಬೆರ್ಮರ ಆರಾಧನಾ ಕೇಂದ್ರಗಳನ್ನು ಆಲಡೆ ಎನ್ನುತ್ತಾರೆ. ಆಲಡೆಗಳಲ್ಲಿ ಬೆರ್ಮ ಪ್ರಧಾನ ದೈವವಾದ ನಾಗ, ನಂದಿಗೋಣ, ಲೆಕ್ಕೆಸಿರಿ, ಕ್ಷೇತ್ರಪಾಲ ಮತ್ತು ಸಿರಿಯ ಬಳಗದವರು ಪರಿವಾರ ದೈವಗಳಾಗುತ್ತಾರೆ.[೮]

“ಮಂಗಳೂರುಡ್ದು ಬಾರ್ಕೂರು ಮುಟ್ಟ ಬಾರ್ಕೂರುಡ್ದು ಮಂಗಳೂರು ಮುಟ್ಟ ಅಡ್ಡ ಲೆಕ್ಕೆಸಿರಿ ನೀಟ ಬೆರ್ಮರ್ ನೀರ್‌ಡ್ ಕನ್ಯೆಲು ಉದಿತ್ ಬೈದೆರ್”[೯]

ವಿಜಯನಗರದ ಅರಸರು ತುಳುನಾಡನ್ನು ಆಳುತ್ತಿದ್ದ ಕಾಲದಲ್ಲಿ ಈ ನಾಡು ಮಂಗಳೂರು ರಾಜ್ಯ ಮತ್ತು ಬಾರ್ಕೂರು ರಾಜ್ಯವೆಂಬುದಾಗಿ ಎರಡು ವಿಭಾಗವಾಗಿತ್ತು. ಈ ಎರಡು ರಾಜ್ಯಗಳ ಮಧ್ಯೆ ಭಾವನಾತ್ಮಕವಾಗಿ ಸಂಬಂಧ ಉಳಿಯಲು ಬೆರ್ಮರು ಲೆಕ್ಕೆಸಿರಿ ಮತ್ತು ಯಕ್ಷಿಣಿಯರೇ ಕಾರಣ.[೧೦] ತುಳುನಾಡಿನಲ್ಲಿ ಹಿಂದೆ ಯಕ್ಷಾರಾಧನೆ ಹೆಚ್ಚು ಪ್ರಚಲಿತವಾಗಿತ್ತು. ಬೆರ್ಮರು ಯಕ್ಷರಾಜನಾದರೆ ಲೆಕ್ಕಸಿರಿ ಯಕ್ಷರಿಗೆಲ್ಲ ತಾಯಿ ಉಳಿದಂತೆ ಯಕ್ಷ ಕನ್ನಿಕೆಯರು ಅವರ ಪರಿವಾರಕ್ಕೆ ಸೇರಿದವರು.[೧೧]

ಕೋಟಿ–ಚೆನ್ನಯ ಪಾಡ್ದನದಲ್ಲಿ ಬರುವ ಮೊದಲ ಸಂಧಿಯೇ ಬೆರ್ಮೆರ ಸಂಧಿ. ಈ ಕಾವ್ಯ ಭಾಗದಲ್ಲಿ ಬೆರ್ಮೆರ ಉಲ್ಲೇಖವಿದೆ. ಅಣಿಗಂಗೆ, ಮಣಿಗಂಗೆ, ನೀರಗಂಗೆ, ಪೇರಗಂಗೆ, ಉಪ್ಪಿನೀರಗಂಗೆ ಹೀಗೆ ಸಪ್ತ ಸಾಗರವನ್ನು ಬಿರ್ಮೆರು ಸೃಷ್ಟಿಸಿದರು. ಏಳುಕಡಲ ನಡುವೆ ಇದ್ದ ಏಳು ಸುತ್ತಿನ ಕೋಟೆಯ ಮಧ್ಯಭಾಗದಲ್ಲಿ ಎದ್ದು ಕಾಣುವ ಗುಡಿಯಲ್ಲಿ ಓಲಗ ನಡೆಸಿದರು. ಮುಂದೆ ಬೆರ್ಮೆರ ವರ್ಣನೆ ಇದೆ. ತಲೆಯಲ್ಲಿ ಏಳಂತರದ ಬಂಗಾರದ ಕಿರೀಟ ಮೂರಂತರದ ಭುಜಕೀರ್ತಿ ಹೊತ್ತ ಹೆಗಲು, ಬಲಭಾಗಕ್ಕೆ ಚಿನ್ನದ ಜನಿವಾರ ಎಡಬದಿಗೆ ಬೆಳ್ಳಿಯ ಜನಿವಾರ ಕಿವಿಗೆ ಕೇಂಜವ ಹಕ್ಕಿಯಾಗಿರದ ಓಲೆ, ಎದೆಯಲ್ಲಿ ಅಮೃತದ ಗಿಂಡೆ, ಕೊರಳಿನಿಂದ ಹೊಟ್ಟೆಯ ಮೇಲ್ಭಾಗದವರೆಗೆ ಮುತ್ತಿನ ಹಾರ, ಕುತ್ತಿಗೆಗೆ ಸುತ್ತಿದ ವಜ್ರಾಲಂಕೃತ ಹಾರಗಳು ಹೂವಿನ ಮಾಲೆಗಳು, ಎದೆಗೆ ಭೀಮಶಕ್ತಿ, ಬೆನ್ನಿಗೆ ಅರ್ಜುನ ಶಕ್ತಿ, ಬೆನ್ನಿಗೆ ಕಟ್ಟಿದ ಬತ್ತಳಿಕೆ ಬತ್ತಳಿಕೆಯೊಳಗೆ ತೀಕ್ಷವಾದ ಬಾಣಗಳು. ಒಂದು ಕೈಯಲ್ಲಿ ಬೆಳ್ಳಿಯ ಧನಸ್ಸು ಇನ್ನೊಂದು ಕೈಯಲ್ಲಿ ಬೆಳ್ಳಿಯ ಬೀಸಣಿಗೆ, ನಡುವಿಗೆ ಸುತ್ತು ಸರ್ಪಾಭರಣ ಪಾದಕ್ಕೆ ಪಾಣಿಪಂಚ ಅಲ್ಲದೆ ವಜ್ರ ಖಚಿತ ಬೆಳ್ಳಿ ಬಂಗಾರದ ಆಭರಣಗಳಿಂದ ಅಲಂಕೃತವಾದ ಗುಂಡದ ಆಸನದಲ್ಲಿ ಬಿರ್ಮೆರು ಕುಳಿತು ಓಲಗ ನಡೆಸಿದರು. ಈ ರೀತಿಯಲ್ಲಿ ಕೋಟಿ–ಚೆನ್ನಯ ಪಾಡ್ದನದಲ್ಲಿ ಬೆರ್ಮೆನ ರೂಪವನ್ನು ಮತ್ತು ಅಲಂಕಾರವನ್ನು ಉಲ್ಲೇಖಿಸಲಾಗಿದೆ.[೧೨]

ಡಾ. ಗೋವಿಂದ ಪೈರವರು ಹೇಳುವಂತೆ ತುಳುನಾಡಿನಲ್ಲಿ "ನಾಗರು" ಎಂಬ ಜನಾಂಗ ಮತ್ತು ಇವರು ಮೂಲತಃ ನಾಗಾರಾಧಕರು, ಇವರಿಗೆ ಮಾರ್ಗದರ್ಶನ ಮಾಡಲು ಒಬ್ಬ ಗುರು ಇರುತ್ತಿದ್ದರು. ಆ ಗುರು ಹೇಳಿದಂತೆ ಇವರು ಕೇಳುತ್ತಿದ್ದರು. ಆ ಗುರುವಿಗೆ 'ನಾಗಬ್ರಹ್ಮ' ಎಂದು ಕರೆಯುತ್ತಾರೆ". ಆ ಗುರು ನಾಗರಲ್ಲಿ ಹಿರಿಯನಾಗಿದ್ದು ರಾಜನೂ ಆಗಿದ್ದಿರಬಹುದೆಂದು ನಂಬಲಾಗಿದೆ. ಸತ್ಯಾನಾಪುರದಲ್ಲಿ ಸಿರಪಾಡ್ದನದ ಸಿರಿಯ ಮಗ ಕೋಟಿ ಕುಮಾರನನ್ನು ಕೂಡಾ ನಾಗಬ್ರಹ್ಮಾಂಶ ಉಳ್ಳವನು ಎಂದು ಹೇಳಿದೆ. ಈತನು ಮಾಯವಾಗಿ ದೈವವಾಗಿ "ಕುಮಾರ" ಅಥವಾ ಕುಮಾರಸ್ವಾಮಿಯ ಹೆಸರಲ್ಲಿ ಆರಾಧನೆ ಪಡೆಯುತ್ತಾನೆ.[೧೩]

ತುಳು ನಾಡಿನ ಬೆರ್ಮೆರ್ ವೈದಿಕ ಕಲ್ಪನೆಯ ಬ್ರಹ್ಮನಿಗಿಂತ ಭಿನ್ನವಾಗಿ ಕಾಣಿಸಿಕೊಂಡಿದೆ. ಇಲ್ಲಿ "ಬೆರ್ಮೆರ್" ಸಂತಾನ ದೇವತೆ. ಸಂಪತಾಭಿವೃದ್ಧಿಯನ್ನು ನೀಡುವ ಈ ದೈವ ಮುನಿದರೆ ತಾನೇ ನೀಡಿದ ಸಂತಾನವನ್ನು ಕೊನೆಗೊಳಿಸುವ ಶಕ್ತಿಯನ್ನು ಹೊಂದಿದೆ. ಬ್ರಹ್ಮಗುಂಡದಲ್ಲಿ ಈತ ನಿರಾಕಾರ. ಕಲ್ಲಿನಲ್ಲಿ ಅಸ್ಪಷ್ಟ ಆಕಾರ. ಕೆಲವೆಡೆ ಲಿಂಗಕಾರ ಮಡಿಕೆಯಲ್ಲಿ (ಕಲಶದಲ್ಲಿ), ಉಯ್ಯಾಲೆಯಲ್ಲಿ ಇರುವಂತೆ ಕಲ್ಪಿಸಲಾಗಿದೆ. ಈತನಿಗೆ ನಾಗಮಂಡಲ, ಢಕ್ಕೆಬಲಿಗಳಲ್ಲಿ ವಿಶಿಷ್ಟವಾದ ಅಸುರೀಭಾವ ಸ್ಮರಿಸುವ ಆಕಾರವನ್ನು ನೀಡಲಾಗಿದೆ. ಗರೋಡಿಗಳಲ್ಲಿ ಕುದುರೆ ಎಂದಿರುವುದು ವೀರಯೋಧನ ರೂಪವಾಗಿದೆ. ಸುಬ್ರಹ್ಮಣ್ಯನದು ಸುಂದರ ರಾಜ ಪುರುಷನ ರೂಪ. ಬ್ರಹ್ಮಯಕ್ಷನದು ಕೊಡ ಕುದುರೆ ಎಂಬ ವೀರನ ಸ್ವರೂಪ! ಅನೇಕ ಪ್ರದೇಶಗಳಲ್ಲಿ ಮೇಲ್ಭಾಗ ನಾಗನ ಹೆಡೆಯಿಂದ ಆವೃತವಾದ ಪುರುಷನ ರೂಪ

ಕೆಳಭಾಗದಲ್ಲಿ ಸರ್ಪರೂಪವಿರುವಮತೆ ಬ್ರಹ್ಮಲಿಂಗೇಶ್ವರ ದೇವಾಲಯಗಳ ಧ್ವಜಸ್ತಂಭಗಳ ತುದಿಯಲ್ಲಿ ನವಿಲು ಆಥವಾ ಕೋಳಿ ಇದೆ. ಬ್ರಹ್ಮಲಿಂಗೇಶ್ವರನನ್ನು ಶಿವನೆಂದು ಹೇಳಿದರೂ ಧ್ವಜ–ಸ್ತಂಭದಲ್ಲಿ ಸುಬ್ರಹ್ಮಣ್ಯನ ವಾಹನ ನವಿಲು ಅಥವಾ ಬೆರ್ಮರನ ಧ್ವಜಲಾಂಛನ ಕೋಳಿ ಇರುವುದು. ಬ್ರಹ್ಮಲಿಂಗೇಶ್ವರ ಮೂಲತಃ 'ಬೆರ್ಮೆರ್'' ಎಂಬುದನ್ನು ಸೂಚಿಸುತ್ತದೆ.[೧೪]

ಹೆಚ್ಚಿನ ಬೆರ್ಮರ್ ತಾಣಗಳು ನದಿಯ ಸಮೀಪದಲ್ಲಯೇ ಇವೆ. ಚೌಕಾರು, ಅರಿಬೈಲು, ಅನಂತಾಡಿ ಮೊದಲಾದ ಪ್ರದೇಶಗಳಲ್ಲಿ ಆಲದ ಮರದಡಿಯಲ್ಲಿ ಬೆರ್ಮರ್ ತಾಣಗಳಿವೆ. ಆಲಡೆಯ ಬೆರ್ಮರ್ ಎಂದು 'ಬೆರ್ಮರ್' ದೈವ ಪ್ರಸಿದ್ಧವಾಗಿದೆ.[೧೫]

ನಾಗಬೆರ್ಮರ್‌ನ ಪಾಡ್ದನಗಳಲ್ಲಿ ಮುಕ್ತವಾಗಿರುವ ಸ್ವರೂಪ ಗುಣಗಳು ಹಾಗೂ ಆರಾಧನ ಪದ್ಧತಿಗಳನ್ನು ಗಮನಿಸಿದಾಗ ಈತನೊಬ್ಬ ತುಳುನಾಡಿನ ಜನಾನುರಾಗ ವೀರರಾಜನಾಗಿರಬೇಕು. ಕಾರಣಾಂತರಗಳಿಂದ ಅಸಹಜ ಮರಣವನ್ನಪ್ಪಿ ದೈವತ್ವಕೇರಿ ಆರಾಧನೆಗೆ ಒಳಪಟ್ಟಿರುವ ಸಾಧ್ಯತೆಯಿದೆ. ಈತ ತುಳುನಾಡಿನ ಪ್ರಾಚೀನ ದೈವ, ಇತರ ದೈವಗಳಿಗೆ ಒಡೆಯ. ಆದ್ದರಿಂದ ಈತನನ್ನು 'ಉಲ್ಲಾಯ' ಎಂದು ಕರೆಯುತ್ತಾರೆ.[೧೬]

ಪ್ರಾಚೀನ ಭಾರತದಲ್ಲಿ ಪ್ರಚಲಿತವಿದ್ದ ಶೈವಾರಾಧನೆ, ನಾಗಾರಾಧನೆ ತುಳುನಾಡಿನಲ್ಲಿ ಪ್ರಚಲಿತವಿದ್ದು ಅರಸು ಆರಾಧನೆ, ಪಿತೃ ಆರಾಧನೆ, ಭೂತಾರಾಧನೆ, ಜೈನರ ಯಕ್ಷಾರಾಧನೆ ಇವೆಲ್ಲದರ ಪ್ರಭಾವ "ಬೆರ್ಮರ್" ಆರಾಧನೆ ಆಗಿರಬಹುದು. ಪರಸ್ಪರ ಕೊಡುಕೊಳ್ಳುವಿಕೆ ಎಂಬುದು ಸಂಸ್ಕೃತಿಯ ಒಂದು ಭಾಗವೇ ಆಗಿದೆ. ಇದರಿಂದಾಗಿ ಬೆರ್ಮರ್ ಆರಾಧನೆ ಪದ್ಧತಿಯ ಮೇಲೆ ನಾನಾ ರೀತಿಯ ಪರಿಣಾಮ ಉಂಟಾಗಿದೆ. 'ಬೆರ್ಮರ್'' ಬ್ರಹ್ಮ ಆಗಿದ್ದಾನೆ. ಬೆರ್ಮರ್ ಬ್ರಹ್ಮಲಿಂಗೇಶ್ವರನೂ ಆಗಿದ್ದಾನೆ. ನಾಗಬ್ರಹ್ಮನೂ ಆಗಿದ್ದಾನೆ. ಭೂತಬ್ರಹ್ಮನೂ ಆಗಿದ್ದಾನೆ. ಬೆರ್ಮರ್ – ನಾಗಬ್ರಹ್ಮನೂ ಆಗಿದ್ದಾನೆ. ನಾಗಬ್ರಹ್ಮನಲ್ಲಿ ಅಭೇದ ಉಂಟಾದಂತೆ ವಾಸುಕಿ, ಸುಬ್ರಹ್ಮಣ್ಯರ ನಡುವಿನ ಅಂತರವೂ ಅಳಿಸಿಹೋಗಿವೆ.

ಶೈವ ಮತದ ಪ್ರಭಾವದಿಂದ ಬ್ರಹ್ಮಲಿಂಗೇಶ್ವರನಾದಂತೆ ಆನಂತರ ವೈಷ್ಣವ ಮತದ ಪ್ರಭಾವದಿಂದ ಅನಂತ ಪದ್ಮನಾಭನಾಗಿಯೂ ಈತ ಆರಾಧನೆ ಪಡೆಯುತ್ತಿದ್ದಾನೆ. ಎಂದು ತಿಳಿಯುತ್ತದೆ. ಈ ಬಗ್ಗೆ ಅಮೃತ ಸೋಮೇಶ್ವರರ "ತುಳುವ ಜಾನಪದದ ಕೆಲವು ನೋಟಗಳು", ಎ.ವಿ. ನಾವಡರವರ "ಕಾಡ್ಯನಾಟ", ದಾಮೋದರ ಕಲ್ಮಾಡಿಯವರ "ಕೋಟಿ ಚೆನ್ನಯ ಪಾಡ್ದನ"ಗಳಲ್ಲಿ ಉಲ್ಲೇಖವಿರುವುದು ತಿಳಿಯುತ್ತದೆ.

ಈ ಬಗ್ಗೆ ಅಮೃತ ಸೋಮೇಶ್ವರರ "ತುಳುವ ಜಾನಪದದ ಕೆಲವು ನೋಟಗಳು", ಎ.ವಿ. ನಾವಡರವರ "ಕಾಡ್ಯನಾಟ", ದಾಮೋದರ ಕಲ್ಮಾಡಿಯವರ "ಕೋಟಿ ಚೆನ್ನಯ ಪಾಡ್ದನ" ಸಂಪುಟ, ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್‌ರವರ "ತುಳುವ ಜಾನಪದ ಕಥೆಗಳು", "ನಾಗ ಬೆರ್ಮ", ಬನ್ನಂಜೆ

ಬಾಬು ಅಮೀನ್ ಮತ್ತು ಮೋಹನ್ ಕೋಟ್ಯಾನ್‌ರವರ "ತುಳು ನಾಡಿನ ಗರೋಡಿಗಳ ಸಾಂಸ್ಕೃತಿಕ ಅಧ್ಯಯನ" ಇಂದಿರಾ ಹೆಗ್ಗಡೆಯವರ ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಡಾ. ವಾಮನ ನಂದಾವರ "ಕೋಟಿ ಚೆನ್ನಯ, ಜಾನಪದೀಯ ಅಧ್ಯಯನ ಪ್ರೊ. ಹಂಪಾ ನಾಗರಾಜಯ್ಯರವರ ಯಕ್ಷ ಯಕ್ಷಿಣಿಯರು, ಮತ್ತು ಡಾ॥ ಇಂದಿರಾ ಹೆಗ್ಗಡೆಯವರ "ತುಳುವರ ಮೂಲ ತಾನ ಆದಿ ಆಲಡೆ ಪರಂಪರೆ ಮತ್ತು ಪರಿವರ್ತನೆ": ಈ ಎಲ್ಲ ಪುಸ್ತಕದಲ್ಲಿ ಉಲ್ಲೇಖಗಳಿರುವುದು ತಿಳಿಯುತ್ತದೆ.



ಬ್ರಹ್ಮಗುಡಿಯ ಒಳಗಿರುವ ಬ್ರಹ್ಮಗುಂಡ (ಇಲ್ಲಿ ಬ್ರಹ್ಮನ ವಿಗ್ರಹವಿಟ್ಟು ಆರಾಧಿಸಲಾಗುವುದು)







## ಸಂದರ್ಭ ಸೂಚಿ

೧. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ – 'ನಾಗಬೆರ್ಮೆ', ಪುಟ ಸಂಖ್ಯೆ. ೫

೨. ರಮನಾಥ ಕೋಟೆಕಾರ್ – 'ತುಳು ನಾಡಿನ ಬಿಲ್ಲವರು', ಪುಟ ಸಂಖ್ಯೆ. ೭೫

೩. ಶೀನಪ್ಪ ಹೆಗ್ಗಡೆಯವರ ಸಂಗ್ರಹ – ತುಳು ಭಾಷೆಯಲ್ಲಿ ಇರುವ ಕನ್ನಡ ಅನುವಾದ ಬೊಬ್ಬರ್ಯ ಪಾಡ್ದನ.

೪. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ – 'ನಾಗಬೆರ್ಮೆ', ಪುಟ ಸಂಖ್ಯೆ. ೭೫

೫. ಅದೇ ಪುಟ ಸಂಖ್ಯೆ. ೭೬

೬. ಅದೇ ಪುಟ ಸಂಖ್ಯೆ. ೮೦

೭. ಅದೇ ಪುಟ ಸಂಖ್ಯೆ. ೮೧

೮. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ – 'ನಾಗಬೆರ್ಮೆ', ಪುಟ ಸಂಖ್ಯೆ. ೮೫

೯. ಡಾ॥ ಇಂದಿರಾ ಹೆಗ್ಗಡೆ – 'ತುಳುವರ ಮೂಲತಾನ ಆದಿ ಆಲಡೆ ಪರಂಪರೆ ಮತ್ತು ಪರಿವರ್ತನೆ" ಪುಟ ಸಂಖ್ಯೆ. ೨೦

೧೦. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ – 'ನಾಗಬೆರ್ಮೆ', ಪುಟ ಸಂಖ್ಯೆ. ೯೧

೧೧. ಅದೇ ಪುಟ ಸಂಖ್ಯೆ. ೯೧

೧೨. ಅದೇ ಪುಟ ಸಂಖ್ಯೆ. ೯೪

೧೩. ಲೀಲಾ ಭಟ್ – 'ಬೆಳಕಿನೆಡೆಗೆ' – ಸಂಶೋಧನಾ ಲೇಖನ, ಪುಟ ಸಂಖ್ಯೆ. ೪೦

೧೪. ಅದೇ ಪುಟ ಸಂಖ್ಯೆ. ೪೪

೧೫. ಅದೇ ಪುಟ ಸಂಖ್ಯೆ. ೪೪

೧೬. ಅದೇ ಪುಟ ಸಂಖ್ಯೆ. ೪೪

**********

# ಅಧ್ಯಾಯ – 3

# ನಾಗಬೆರ್ಮೆರ ನಿಷ್ಪತ್ತಿ ಸ್ವರೂಪ

ಅನಾದಿ ಕಾಲದಿಂದಲೂ ತುಳುನಾಡಿನ ಜನರು ನಂಬಿಕೊಂಡು ಬಂದಿರುವ ದೈವವೆಂದರೆ ಬಿರ್ಮೆರ್, ಬೆರ್ಮೆರ್, ಅಥವಾ ನಾಗಬೆಮ್ಮೆರ್. ತುಳುನಾಡಿನ ಅನೇಕ ಕಡೆ ಬೆರ್ಮೆರಿಗೆ ಗುಡಿ ಆಲಡೆಗಳಿವೆ. ತುಳು ಜನಪದದಲ್ಲಿ ಪಾಡ್ದನಗಳನ್ನು ದೈವದ ಉಲ್ಲೇಖ ಅಲ್ಲಲ್ಲಿ ಕಂಡು ಬರುತ್ತದೆ. ತುಳು ಮೌಖಿಕ ಮಹಾಕಾವ್ಯಗಳಾದ ಆಕ್ಕೆರಸು ಸಿರಿ ಮತ್ತು ಕೋಟಿ ಚೆನ್ನಯ ಪಾಡ್ದನಗಳಲ್ಲಿ ಬೆರ್ಮೆರ ಕುರಿತು ಮಾಹಿತಿ ದೊರೆಯುತ್ತದೆ. ಭೂತಾರಾಧನೆಗೆ ಪ್ರಸಿದ್ಧಿ ಪಡೆದ ತುಳುನಾಡಿನಲ್ಲಿ ಜನರು ಸಾಮಾನ್ಯವಾಗಿ ಬೆರ್ಮೆನನ್ನು ಒಂದು ಭೂತವೆಂದೇ ಪರಿಗಣಿಸಿದ್ದಾರೆ. ಅನೇಕ ಗುಡಿಗಳಲ್ಲಿ ಬೆರ್ಮೆನು ಭೂತಗಳಿಗೆ ಒಡೆಯ ಆದರೆ ಕಾಲಾಂತರದಲ್ಲಿ ಬೆರ್ಮೆನನ್ನು ನಾಗನೊಂದಿಗೆ ಸಮೀಕರಿಸಿರುವ ಸಾಧ್ಯತೆಗಳಿವೆ. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ "ನಾಗಬೆರ್ಮೆ" ಎಂಬ ಪುಸ್ತಕದಲ್ಲಿ 'ಬಿರ್' ಎಂಬುದು 'ಬೆರ್ಮೆ' ಅಥವಾ 'ಬಿರ್ಮೆ' ಎಂಬ ಪದದ ಮೂಲರೂಪ. ಉತ್ತರ ಭಾರತದಲ್ಲಿ ಯಕ್ಷನನ್ನು 'ಬಿರ್' ಎಂದು ಕರೆಯಲಾಗುತ್ತಿತ್ತು. 'ಬಿರ್' ಎಂಬ ಪದ ದ್ರಾವಿಡ ಮೂಲದಿಂದ ಬಂದಿದೆ.

ತುಳುವಿನಲ್ಲಿ 'ಬಿರ್" ಎಂಬ ಪದಕ್ಕೆ ವೇಗವಾಗಿ (ಬಿರ್ಗಾಳಿ ಬಿರುಗಾಳಿ) ಬುದ್ಧಿವಂತ (ಬಿರ್ಸೆ) ಶೌರ್ಯವಂತೆ (ಬೀರ) ಸೃಷ್ಟಿ, ಅರಳುವುದು, ಒಡೆಯುವುದು, ಮುಕ್ತಾಯಗೊಳ್ಳುವುದು. ಬೆರ್ಮೆರ್– ಇದು ಬಿರ್ಮೆ ಪದದ ಬಹುವಚನ ಅಥವಾ ಗೌರವ ಸೂಚಕ ರೂಪ.[೧]

ಬೆರ್ಮೆರ್ ಪದಾರಂಭದಲ್ಲಿದ್ದ 'ಇ' ಕಾರವು ಇತರ ದ್ರಾವಿಡ ಮೂಲದ ಭಾಷೆಗಳಿಂದ ತುಳುವಿಗೆ ಬರುವಾಗ 'ಎ' ಕಾರವೂ ತಾಳುತ್ತೇವೆ. ಉದಾ: (ಇಲಿ–ಎಲಿ ಕಿವಿ–ಕೆಬಿ)

ಹೀಗೆ 'ಬಿರ್‌ಮಹಾ' ಅಥವಾ ಬಿರ್ ತುಳುನಾಡಿಗೆ ಬಂದು ಅದಿಕಾಲದ ಆರಾಧ್ಯ ದೈವ 'ಬೆರ್ಮೆ'ನಾದ ಕೊನೆಗೆ ಬೆಮ್ಮೆರ್ ಆದ ತುಳುವರು 'ಬೆರ್ಮೆ'ನಿಗೆ ಗುಡಿ ಕಟ್ಟಿಸಿದರು.[೨]

ಬೆರ್ಮೆನಿಗೆ ಶೌರ್ಯವಂತ, ಸೃಷ್ಟಿಕರ್ತೆ ಎಂಬ ಅರ್ಥಗಳನ್ನು ನೀಡಲಾಯಿತು. ಈ ಆರ್ಥಗಳಿಗೆ ಅನ್ವಯವಾಗುವಂತೆ ಬೆರ್ಮೆನ ಮೂರ್ತಿ ನಿರ್ಮಾಣ ಮಾಡಲಾಯಿತು. ಹೀಗೆ ಆತ ಅಶ್ವಾರೂಢನಾದ ಕೈಯಲ್ಲಿ ಖಡ್ಗ, ತಲೆಗೆ ಕಿರೀಟ, ಭುಜಕೀರ್ತಿ, ಎದೆಕವಚ ಇತ್ಯಾದಿ ಅಲಂಕಾರ ಸಾಧನೆಗಳಿಂದ ಬೆರ್ಮೆನನ್ನು ಸಾಕಾರಗೊಳಿಸಿ ಶೌರ್ಯವಂತನನ್ನಾಗಿ ಬಿಂಬಿಸಲಾಯಿತು. ಬ್ರಹ್ಮ ಎಂಬ ಸಂಬಂಧ ಪದದ ತದ್ಭವ ರೂಪವೇ ಬೆರ್ಮೆ ಎಂಬುದಾಗಿ ಭಾವಿಸುವರಿದ್ದಾರೆ. ಆದರೆ ಬ್ರಹ್ಮ ತದ್ಭವಗೊಂಡು ಕನ್ನಡಕ್ಕೆ ಬಂದಾಗ ಬೊಮ್ಮ ಆಗಿದ್ದಾನೆ. ತಮಿಳಿಗೆ ಹೋದಾಗ ಬೊಮ್ಮನ್ ಆಗಿದ್ದಾನೆ. ತೆಲುಗಿಗೆ ಹೋದಾಗ ಬೊಮ್ಮಲು ಆಗಿದ್ದಾನೆ. ಹೀಗಾಗಿ ಬ್ರಹ್ಮನು ಬೆರ್ಮೆ ಆಗುವ ಸಾಧ್ಯತೆ ಕಡಿಮೆ. ಸಂಸ್ಕೃತದಿಂದ ದ್ರಾವಿಡ

ಭಾಷೆಗಳಿಗೆ ಅನೇಕ ಶಬ್ಧಗಳು ಬಂದು ಸೇರಿಕೊಂಡಿವೆ. ಅದರಂತೆ ದ್ರಾವಿಡ ಭಾಷೆಯಿಂದಲೂ ಕೂಡಾ ಸಂಸ್ಕೃತ ಭಾಷೆಗೆ ಸೇರಿದ ಅನೇಕ ಪದಗಳಿವೆ ಇದನ್ನು ಬಹಳ ಹಿಂದೆಯೇ ಕಿಟ್ಟಲ್ ಅವರು ಉಲ್ಲೇಖಿಸಿದ್ದಾರೆಂದು "ನಾಗಬೆರ್ಮ" ಎಂಬ ಪುಸ್ತಕದಲ್ಲಿ ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ಉಲ್ಲೇಖ ಮಾಡಿದ್ದಾರೆ.[೩]

ಪಿರಾಕ್ ಎಂಬುದೊಂದು ಸ್ಥಳನಾಮ. ಅದು ಪ್ರಾಚೀನ ಬಲೂಚಿಸ್ಥಾನ (ಈಗಿನ ಅಪಘಾನಿಸ್ಥಾನ) ದಲ್ಲಿರುವ ಒಂದು ಊರು. ಪ್ರಾಚೀನ ಇರಾಕ್‌ನಲ್ಲಿಯೂ 'ಪಿರಾಕ್' ಎಂಬೊಂದು ಸ್ಥಳವಿತ್ತು. ರಾಜಸ್ಥಾನದ ಈಗಿನ ಪುಷ್ಕರ ಪ್ರದೇಶದಲ್ಲೂ ಪಿರಾಕ್ ಎಂಬ ಸ್ಥಳವಿದ್ದ ತುಳುನಾಡಿನ ಮೂಲ ನಿವಾಸಿಗಳು. ವೇದಪೂರ್ವ ಕಾಲದಲ್ಲಿ ಈ ಊರಿನ ನಿವಾಸಿಗಳಾಗಿದ್ದು ಬುಡಕಟ್ಟು ಜನಾಂಗಕ್ಕೆ ಸೇರಿದವರಾಗಿದ್ದು ಪ್ರಾಚೀನ ತುಳು ಭಾಷೆಯಲ್ಲಿ ಅದೇ ಅರ್ಥದಲ್ಲಿ ಬಳಕೆಯಲ್ಲಿದೆ. ಪಿರಾಕ್ ಎಂಬ ತುಳು ಪದವು ಪ್ರಾಕೃತ ಭಾಷೆಯಲ್ಲಿ ಮತ್ತು ಸಂಸ್ಕೃತದಲ್ಲಿ ಪ್ರಾಕ್ ಎಂಬುದಾಗಿ ರೂಪಾಂತರಗೊಂಡಿದೆ.

ಪಿರಾಕ್ ನಿವಾಸಿಗಳೆಲ್ಲವರೂ ಬಿರ್ಮ (ಬೆರ್ಮ) ಎಂಬ ಹೆಸರಿನ ದೇವರನ್ನು ಆರಾಧಿಸುತ್ತಿದ್ದರು. ಗೌರವಾರ್ಥವಾಗಿ ಬೆರ್ಮನನ್ನು ಬೆರ್ಮರ್ ಎಂದು ಸಂಬೋಧಿಸುತ್ತಿದ್ದರು. ಅಲ್ಲಿನ ಮೂಲ ನಿವಾಸಿಗಳೇ ತುಳುನಾಡಿಗೆ ಬಂದು ನೆಲೆಸಿದರೆಂದು ಕೆಲವು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ. ತುಳುವರು ಮುಂದೆ ತುಳುನಾಡಿಗೆ ಬಂದು ನೆಲೆಸಿದಾಗ ಬೆರ್ಮನನ್ನೇ ತಮ್ಮ ಆರಾಧ್ಯದೈವವಾಗಿ ಮಾಡಿಕೊಂಡರು. ಈ ಬೆರ್ಮ ಅನೇಕ ಶತಮಾನಗಳವರೆಗೆ ತುಳುನಾಡಿನ ಪ್ರಧಾನ ದೇವರಾಗಿದ್ದು ಸುಮಾರು 70–80 ಬೆರ್ಮರ ಆರಾಧ್ಯ ಕೇಂದ್ರಗಳು ಈಗಲೂ ತುಳುನಾಡಿನ ಹಳ್ಳಿಗಳಿವೆ ಅನೇಕ ಕಡೆ ಕಂಡುಬರುತ್ತಿದ್ದು ಈ ತಾನಗಳ ಅವಶೇಷಗಳಿವೆ.[೪]

ಪುಷ್ಕರದಲ್ಲಿ ಈಗಲೂ ಒಂದು ಬ್ರಹ್ಮನ ದೇವಸ್ಥಾನವಿದೆ. ಇದು ಮೂಲತ ಬೆರ್ಮರ್ ಆಗಿದ್ದು. ಈಗ ಸಂಸ್ಕತಾನುಕರಣದಿಂದ ಚತುರ್ಮುಖ ಬ್ರಹ್ಮ ಆಗಿದೆ. ಇದು ಭಾರತದ ಎಕೈಕ ಬ್ರಹ್ಮ ದೇವಸ್ಥಾನವೆಂದು ಹೇಳಲ್ಪಡುತ್ತದೆ. ಇಲ್ಲಿ ಮೊದಲಿಗಿಟ್ಟ ಆಶ್ವಾರೋಹಿ ಬಿರ್ಮನನ್ನು ಬದಲಿಸಿ ಚತುರ್ಮುಖ ಬ್ರಹ್ಮನನ್ನು ಪ್ರತಿಷ್ಠಾಪಿಸಲಾಗಿದೆ. ಬೆರ್ಮ ತುಳುನಾಡಿನ ಜನರಿಗಷ್ಟೇ ಅಲ್ಲ ಭಾರತದ ಹಲವಾರು ಬುಡಕಟ್ಟು ಜನರಿಗೆ ಪ್ರಾಚೀನ ದೈವನಾಗಿದ್ದನು ಎಂಬುದಂತೂ ಸತ್ಯ.[೫]

ಪ್ರಾಚ್ಯ ಸಂಶೋಧನಾ ಇಲಾಖೆಯವರು ಈ 'ಪಿರಾಕ್' ಎಂಬ ಸ್ಥಳದಲ್ಲಿ ಉತ್ಖನನ ಮಾಡಿದಾಗ ಕ್ರಿ.ಪೂ. 1700ರ ಕಾಲಕ್ಕೆ ಸೇರಿದ ಮಣ್ಣಿನಿಂದ ಮಾಡಿದ ಬೆರ್ಮನ ಮೂರ್ತಿಗಳು ದೊರೆತಿವೆ. ಈ ಮೂರ್ತಿಗಳು ಕುದುರೆ ಮೇಲೆ ಕುಳಿತ ಪುರುಷಾಕೃತಿಯ ಅವಶೇಷಗಳಾಗಿವೆ. ತುಳುನಾಡಿನಲ್ಲಿ ಈಗಲೂ ಅರಾಧಿಸಲ್ಪಡುವ ಬಿರ್ಮನ ಮೂರ್ತಿಗಳಿಗೂ ಈ ಅವಶೇಷಗಳಿಗೂ ಬಹಳಷ್ಟು ಹೊಂದಾಣಿಕೆಗಳಿವೆ.

ಕುದುರೆಯ ಮೇಲೆ ಕುಳಿತ ಪುರುಷಾಕೃತಿಯನ್ನು ಹೊಂದಿದ ಈ ಮೂಲ ಬೆರ್ಮೆ ಸೃಷ್ಟಿಕರ್ತನೆಂಬ ನೆಲೆಯಲ್ಲಿ ಆರಾಧನೆಗೊಳ್ಳುತ್ತಿದ್ದನು. ಪುರಾಣಗಳ ಸೃಷ್ಟಿಯಾದ ಬಳಿಕ ಬ್ರಹ್ಮ, ವಿಷ್ಣು, ಮಹೇಶ್ವರನ ಕತೆಗಳು ರಚಿಸಲ್ಪಟ್ಟವು. ಆದಿದೈವ ಬೆರ್ಮೆ ಪುರಾಣದ ಚತುರ್ಮುಖ ಬ್ರಹ್ಮನಾಗಿ ಪರಿವರ್ತನೆ ಹೊಂದಿದ ಭಾರತ ಉಪಖಂಡದಲ್ಲಿ ಈ ರೂಪಾಂತರಕ್ಕೆ ಸುಮಾರು ನಾಲ್ಕು ಸಹಸ್ರಮಾನ ವರ್ಷಗಳೇ ಕಳೆದಿವೆ. [೬]

'ಬಿರ್ಮೆರ್' ಬೆರ್ಮೆರ್ ದೊರೆಗಳ ಕುಲ ದೈವ–ಆಗಿರಬೇಕು. "ಆದಿ ಆಲಡೆಯ ಬೆರ್ಮೆರ್ ಮತ್ತು ಪರವಾರ ದೈವಗಳು ತುಳುವರು ಕುಲದೈವಗಳಾಗಿವೆ. ಬಿರ್ಮೆರ್ ಮತ್ತು ಬೆರ್ಮೆರ್ ಎಂಬ ಪದದಲ್ಲಿ ಪ್ರಾದೇಶಿಕ ಭಿನ್ನತೆ ಇದ್ದರೂ ಎರಡೂ ಪ್ರಯೋಗಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. [೭]

ತುಳುನಾಡಿನ ಬಹಳಷ್ಟು ಆಲಡೆ, ಗರಡಿಗಳಲ್ಲಿರುವ ಬೆರ್ಮೆರ ಮೂರ್ತಿಗಳ ವರ್ಣನೆಯನ್ನು "ಗರೋಡಿಗಳು" ಎಂಬ ಅಧ್ಯಯನ ಗ್ರಂಥದಲ್ಲಿ ಬನ್ನಂಜೆ ಬಾಬು ಅಮೀನ್ ಮತ್ತು ಮೋಹನ್ ಕೋಟ್ಯಾನ್ ಗರೋಡಿಗಳಲ್ಲಿ ಬೆರ್ಮೆನ ರೂಪಾಲಂಕಾರ ಬಗ್ಗೆ ಈ ಕೆಳಗಿನಂತೆ ನಿರ್ಧಾರಕ್ಕೆ ಬರಬಹುದಾಗಿದೆ.[೮]

ಬೆರ್ಮೆ ಎಂದರೆ ಯಕ್ಷರಾಜ ಎಂಬ ಕಲ್ಪನೆ ಇದೆ. ಯಕ್ಷನನ್ನು ರಾಜನ್ ಎಂದು ಸಂಬೋಧಿಸುವ ಪದ್ಧತಿಯಲ್ಲೆ ಇದೆ. ಈ ಕಲ್ಪನೆಗನುಸಾರವಾಗಿ ಬೆರ್ಮೆನಿಗೆ ಒಂದು ರಾಜನ ಮೂರ್ತಿ ರೂಪವನ್ನು ನೀಡಲಾಗಿದೆ. ರಾಜ ಎಂದಾಗ ಆತನಿಗೊಂದು ವಾಹನವಿರಬೇಕು. ಬೆರ್ಮೆ ಶಿವನ ಪರಿವಾರಕ್ಕೆ ಸೇರಿದವನು. ಬೆರ್ಮೆ ಓರ್ವ ರಾಜನ್ ಆಗಿರುವುದರಿಂದ ರಾಜನಿಗೆ ತಕ್ಕಂತೆ ಆತನಿಗೆ ಕುದುರೆಯನ್ನು ವಾಹನವನ್ನಾಗಿ ಮಾಡಲಾಗಿದೆ.[೯]

ಬೆರ್ಮೆನಿಗೆ ರಾಜನ ವೇಷ ಭೂಷಣ ಅಲಂಕಾರ ಸಾಧನಗಳಿರುತ್ತದೆ. ತಲೆಯ ಮೇಲೆ ಕಿರೀಟ ಇರುತ್ತದೆ. ಹೆಗಲಿಗೆ ಭುಜಕೀರ್ತಿ, ಕೈಗೆ, ಎದೆಕವಚ, ಕಾಲಿಗೆ ಕಾಲಕಡಗವಿರುತ್ತದೆ. ತಲೆಯವರಿಗೆ ಪ್ರಭಾವಳಿ ಇದ್ದು ಕೆಲವೊಂದು ಕಡೆ ನಾಗನ ಹೆಡೆಯ ಪ್ರಭಾವಳಿಯಾಗಿರುತ್ತದೆ. ಪ್ರಭಾವಳಿ ಇಲ್ಲದೆ ಹೋದರೆ. ಅಂತರ ಸ್ತುತಿಗೆ ಇರುತ್ತದೆ. ಕೋಟಿ–ಚೆನ್ನಯ ಪಾಡ್ದನದಲ್ಲಿ ಬರುವ ಬೆರ್ಮೆ ಹಾಗೂ ಬಾಮುಲ್ಲ ಕುಮಾರನ ರೂಪ ವರ್ಣನೆಯೂ ಇದೆ ರೀತಿಯಿದೆ.[೧೦]

ಹೆಚ್ಚಿನ ಬೆರ್ಮೆರ ಕೈಯಲ್ಲಿ ಖಡ್ಗ, ದಂಡ, ತ್ರಿಶೂಲಗಳಿರುತ್ತದೆ. ಕೆಲವೊಂದು ಮೂರ್ತಿಗಳಲ್ಲಿ ಕಠಾರಿಯ ಸೊಂಟದಲ್ಲಿರುತ್ತದೆ. ಇನ್ನು ಕೆಲವು ಬೆರ್ಮೆನ ಮೂರ್ತಿಯ ಕೈಯಲ್ಲಿ ಅಮೃತ ಕಲಶವಿರುತ್ತದೆ. ಅಥವಾ ಜಲಪಾತ್ರೆ ಇರುತ್ತದೆ. ಬೆರ್ಮೆ ಒಬ್ಬ ಯಕ್ಷ ಎನ್ನುವುದಕ್ಕೆ ಇದು ಸಾಕ್ಷಿಯಾಗುತ್ತದೆ! ಅಳದಂಗಡಿಯ ಫಲ್ಗುಣಿ ನದಿಯ ದಂಡೆಯ ಒಂದು ಗುಡ್ಡೆಯ ಮೇಲಿರುವ ಬೆರ್ಮೆನ ಮೂರ್ತಿಯ ಬಗ್ಗೆ ಸಂಶೋಧಕ ಡಾ. ಗುರುರಾಜ ಭಟ್ (1975) ತನ್ನ ಗ್ರಂಥದಲ್ಲಿ ಹೀಗೆ

ಬರೆದಿದ್ದಾರೆ. "ಈ ಮೂರ್ತಿಯನ್ನು ನಯವಾದ ಕಪ್ಪು ಕಲ್ಲಿನಿಂದ ಕೆತ್ತಲಾಗಿದೆ. ಇದು ಬೆರ್ಮನ ಸರಿಯಾದ ಮೂರ್ತಿ ಎಂದಿದ್ದಾರೆ. ಆದರೆ ಬೆರ್ಮನಿಗೆ ನಾಲ್ಕು ಕೈಗಳಿವೆ ಮೂರು ಕೈಗಳಲ್ಲಿ ಆಯುಧಗಳಿವೆ ಒಂದು ಕೈಯನ್ನು ಸೊಂಟಕ್ಕೆ ಹಿಡಿದುಕೊಂಡಿದ್ದಾನೆ. ಈ ಬೆರ್ಮನು ಕುದುರೆಯ ಮೇಲೆ ಕುಳಿತ್ತಿದ್ದಾನೆ. ತಲೆಗೆ ಉದ್ದದ ಟೊಪ್ಪಿಯ ಆಕಾರದ ಕಿರೀಟವಿದೆ. ಪ್ರಭಾವಳಿ ಇಲ್ಲ. ಇದು ಬೆರ್ಮನ ಪರಿವಾರ ರೂಪವೆಂದು ಹೇಳಲೂ ಬರುವುದಿಲ್ಲ.[೧೧]

ಯಕ್ಷನಾಗ, ಗಂಧರ್ವ, ಕಿನ್ನರ, ಕಿಂಪುರುಷ – ಇವರೆಲ್ಲ ಅವೈದಿಕ ಧರ್ಮವನ್ನು ಅನುಸರಿಸುತ್ತಿರುವ ಜನರ ಆರಾಧನಾ ದೈವಗಳು. ಒಂದೇ ಸಾಲಿಗೆ ಸೇರಿದ ಇವರಿಗೆಲ್ಲ ಯಕ್ಷರೇ ನಾಯಕರು. ಹಾಗಾಗಿ ಯಕ್ಷನನ್ನು ಪ್ರಧಾನ ದೇವತೆಯಾಗಿ ಚಿತ್ರಿಸಲ್ಪಟ್ಟ ಶಿಲ್ಪಿಗಳಲ್ಲಿ ಅಕ್ಕಪಕ್ಕದಲ್ಲಿ ನಾಗ ಗಂಧರ್ವ ಚಿತ್ರಗಳು ಕಡೆಯಲ್ಪಟ್ಟಿವೆ. ಯಕ್ಷರಿಗೂ ನಾಗರಿಗೂ ಹತ್ತಿರದ ಸಂಬಂಧವಿದೆ. ಜೈನ ಪುರಾಣದಲ್ಲಿಯೂ ನಾಗರಾಗಿದ್ದವರು ಮರುಜನ್ಮದಲ್ಲಿ ಯಕ್ಷರಾದ ಉಲ್ಲೇಖವಿದೆ. ತುಳುನಾಡಿನಲ್ಲಿ ಅನಾದಿ ಕಾಲದಿಂದಲೂ ನಾಗಾರಾಧನೆ ರೂಢಿಯಲ್ಲಿತ್ತು. ನಂತರ ಯಕ್ಷಾರಾಧನೆಯ ಪ್ರಭಾವದಿಂದ ಬೆರ್ಮರ ಆರಾಧನೆ ಪ್ರಾರಂಭವಾಯಿತು.[೧೨] ಬೆರ್ಮನ ಆರಾಧನೆಯಿಂದ ಸಾರ್ವತ್ರಿಕವಾದ ನಾಗನ ಆರಾಧನೆ ಎಲ್ಲಿ ಕುಂಠಿತವಾಗುತ್ತದೆ ಎಂದು ಭಾವಿಸಿದ ಇಲ್ಲಿನ ಜನರು ಯಕ್ಷರಾಜನಾದ ಬೆರ್ಮನ ಹಿಂದೆ ಬಂದು ನಾಗನ ಹೆಡೆಯ ಪ್ರಭಾವಳಿಯನ್ನು ಜೋಡಿಸಿದರು. ಬಿರ್ಮನನ್ನು ನಾಗಬೆರ್ಮನನ್ನಾಗಿ ಮಾಡಿದರು ಎನ್ನಬಹುದು. ನಾಗನಿಗೂ ಬಿರ್ಮನಿಗೂ ಏಕಕಾಲದಲ್ಲಿ ಆರಾಧನೆ ನಡೆಯುವಂತೆ ಮಾಡಿ ಭಕ್ತರು ಸಂತುಷ್ಟರಾದರು. ಈ ರೀತಿಯ ಮೂರ್ತಿವಿನ್ಯಾಸದ ಕಲ್ಪನೆಯ ಮೂಲಕ ಬಿರ್ಮನನ್ನು ನಾಗನೊಂದಿಗೆ ಸಮೀಕರಿಸಲಾಯಿತು. ಮತ್ತೆ ಸಂಸ್ಕೃತಾನುಕರಣೆ ಪರಿಣಾಮವಾಗಿ ನಾಗಬಿರ್ಮನು ನಾಗಬ್ರಹ್ಮನಾದನು. ತುಳುನಾಡಿನಲ್ಲಿ ಕುಮಾರನ (ಸುಬ್ರಹ್ಮಣ್ಯ) ನಾಗನೊಂದಿಗೆ ಸಮೀಕರಿಸುವುದನ್ನು ಇದಕ್ಕೆ ಉದಾಹರಣೆಯಾಗಿ ಹೇಳಬಹುದು. ಇಲ್ಲಿಯೂ ಕೂಡಾ ಷಣ್ಮುಖನ ಮೂರ್ತಿಗೆ ನಾಗನ ಹೆಡೆಯ ಪ್ರಭಾವಳಿಯನ್ನು ಜೋಡಿಸಲಾಗಿದೆ.[೧೩]

ಹಲವು ಕಡೆಗಳಲ್ಲಿ ಬೆರ್ಮನ ಅಕ್ಕಪಕ್ಕದಲ್ಲಿ ನಾಗಕನ್ನಿಕೆಯರು ನಿಂತಿರುವ ಶಿಲ್ಪಗಳು ಕಂಡು ಬರುತ್ತವೆ. ಆದರೆ ಹೆಚ್ಚಿನ ಚಿತ್ರಗಳಲ್ಲಿ ಬೆರ್ಮನೇ ಪ್ರಧಾನ ದೇವತೆಯಾಗಿದ್ದಾನೆ. ಇತ್ತೀಚೆಗಿನ ಕೆಲವು ಶಿಲ್ಪಗಳಲ್ಲಿ ಬೆರ್ಮನನ್ನು ಬ್ರಹ್ಮನೆಂದು ಪರಿಗಣಿಸಿ ನಾಲ್ಕು ತಲೆಗಳನ್ನು ರೂಪಿಸಿದ್ದು ಇದೆ. ಬ್ರಹ್ಮನೇ ಬಿರ್ಮನಾಗಿರಬಾರದೇಕೆ ಎಂಬು ವಾದವೂ ಇದೆ.

ಬಿರ್ಮನ ಆಯುಧ ಅಲಂಕಾರ ವಿಶೇಷಗಳಲ್ಲಿ ಖಡ್ಗ ಕಲಶಗಳಿರುವುದು ಸಹಜ. ಆದರೆ ಅಗ್ನಿಪಾತ್ರೆ ಹಿಡಿದಿರುವುದು ಅಸಹಜ ಏಕೆಂದರೆ ಬಿರ್ಮನು ಜಲಸಂಸ್ಕೃತಿಗೆ – ಸಂಬಂಧಪಟ್ಟವನಾಗಿದ್ದು ಮತ್ತು ಅಗ್ನಿ ಆರಾಧನೆ ಕೈಗೊಳ್ಳದವನು ಆಗಿದ್ದಾನೆ.[೧೪]

ಬೆರ್ಮನು ತುಳುನಾಡಿನ ರಾಜ ಮನೆತನದವರ ಆರಾಧ್ಯ ದೇವತೆ ಆಗಿರುವುದರಿಂದಲೇ ಆತ ರಾಜನ ರೂಪ, ಅಲಂಕಾರ, ಆಯುಧ ವಾಹನಗಳನ್ನು ಪಡೆದಿದ್ದಾನೆ ಎಂದು ಸಂಶೋಧಕ ಡಾ. ಪೀಟರ್ ಜೆ. ಕ್ಲಾಸ್ ಅವರು ಅಭಿಪ್ರಾಯ ಪಡುತ್ತಾರೆ. ತುಳುನಾಡಿನ ಜನರು ಆತನನ್ನು ಸ್ವಾಮಿ ಎಂದು ಸಂಭೋದಿಸುತ್ತಿದ್ದರು. ಈಗಲೂ ಕೂಡ ತುಳುವರ ಬಾಯಿಯಲ್ಲಿ "ಸ್ವಾಮಿ ಭೂಮಿ" ಎಂಬ ಪದಗಳು ಕಷ್ಟಕಾಲದಲ್ಲಿ ಉಚ್ಚರಿಸಲ್ಪಡುತ್ತದೆ. ಕುಂದಾಪುರದ ಕಡೆ ಸ್ವಾಮಿಗೆ ಕೋಲ ಮಾಡುತ್ತಾರೆ. ಇದು ಬೆರ್ಮನಡೆ, ಆರಾಧನೆ, ವೈದಿಕ, ಜೈನ, ಬೌದ್ಧ ಪುರಾಣದ ದೇವ ದೇವತೆಗಳ ಹುಟ್ಟು ಬೆಲಗಣಿಗೆ ಕಾರ್ಣಿಕಗಳ ಬಗ್ಗೆ ಬೇರೆ ಬೇರೆ ಕತೆಗಳಿವೆ. ಆದರೆ ಬಿರ್ಮನ ಬಗ್ಗೆ ಅಂತಹ ಕತೆ, ಐತಿಹ್ಯ, ಪುರಾಣಗಳಿಲ್ಲ. ಕೋಟಿ–ಚೆನ್ನಯ ಪಾಡ್ದನದಲ್ಲಿ ಬೆರ್ಮ ಸ್ವರೂಪವನ್ನು ಉಲ್ಲೇಖಿಸಿದ್ದು ಕೋಟಿ–ಚೆನ್ನಯ ಪಾಡ್ದನದ ಮೊದಲ ಸಂಧಿಯೂ ಬೆರ್ಮರ ಸಂಧಿ ಈ ಕಾವ್ಯ ಭಾಗದಲ್ಲಿ ಬೆರ್ಮರು ಹೇಗೆ ಸೃಷ್ಟಿಯಾದರು ಎಂಬ ಕತೆ ಇದೆ.[೧೫]

ಅಣಿಗಂಗೆ, ಮಣಿಗಂಗೆ ನೀರಗಂಗೆ, ಪೇರಗಂಗೆ ಉಪ್ಪಿನೀರಗಂಗೆ ಹೀಗೆ ಸಪ್ತ ಸಾಗರವನ್ನು ಬಿರ್ಮರು ಸೃಷ್ಟಿಸಿದರು. ಏಳು ಜಲ ನಡುವೆ ಇದ್ದ ಏಳು ಸುತ್ತಿನ ಕೋಟೆಯ ಮಧ್ಯ ಭಾಗದಲ್ಲಿ ಎದ್ದು ಕಾಣುವ ಗುಡಿಯಲ್ಲಿ ಓಲಗ ನಡೆಸಿದರು. ಮುಂದೆ ಬೆರ್ಮರ ವರ್ಣನೆ ಇದೆ. ತಲೆಯಲ್ಲಿ ಏಳಂತರದ ಬಂಗಾರದ ಕಿರೀಟ. ಮೂರಂತರದ ಭುಜಕೀರ್ತಿ ಹೊತ್ತ ಹೆಗಲು, ಬಲಭಾಗಕ್ಕೆ ಚಿನ್ನದ ಜನಿವಾರ, ಎಡಬದಿಗೆ ಬೆಳ್ಳಿಯ ಜನಿವಾರ ಕಿವಿಗೆ ಕೇಂಜವ ಹಕ್ಕಿಯಾಕಾರದ ಓಲೆ, ಎದೆಯಲ್ಲಿ ಅಮೃತದ ಗಿಂಡೆ, ಕೊರಳಿನಿಂದ ಹೊಟ್ಟೆಯ ಮೇಲ್ಭಾಗದವರೆಗೆ ಮುತ್ತಿನ ಹಾರ, ಕುತ್ತಿಗೆಗೆ ಸುತ್ತಿದ ವಜ್ರಾಲಂಕೃತ ಹಾರಗಳು. ಹೂವಿನ ಮೂರ್ತಿಗಳು ಎದೆಗೆ ಬತ್ತಳಿಕೆ, ಬತ್ತಳಿಕೆಯೊಳಗೆ ತೀಕ್ಷ್ಣವಾದ ಬಾಣಗಳು ಒಂದು ಕೈಯಲ್ಲಿ ಬೆಳ್ಳಿಯ ಧನುಸು, ಇನ್ನೊಂದು ಕೈಯಲ್ಲಿ ಬೆಳ್ಳಿಯ ಬೀಸಣಿಗೆ ನಡುವಿಗೆ ಮತ್ತು ಸರ್ಪಾಭರಣ ಪಾದಕ್ಕೆ ಪಾಣಿಪಂಚ (ಐದು ಬೆರಳುಗಳನ್ನು ಸುತ್ತಿ ಪಾದವನ್ನು ಮುಚ್ಚಿಕೊಂಡಿರುವ ಬೆಳ್ಳಿಯ ಆಭರಣ) ಈ ರೀತಿಯಲ್ಲಿ ವಜ್ರ ಖಚಿತ ಬೆಳ್ಳಿಯ ಬಂಗಾರದ ಆಭರಣಗಳಿಂದ ಅಲಂಕೃತವಾದ ಗುಂಡದ ಆಸನದಲ್ಲಿ ಬಿರ್ಮರು ಕುಳಿತು ಓಲಗ ನಡೆಸಿದರು ಎಂದು ಕೋಟಿ–ಚೆನ್ನಯ ಪಾಡ್ದನದಲ್ಲಿ ಬೆರ್ಮರ ರೂಪವನ್ನು ಉಲ್ಲೇಖಿಸುತ್ತದೆ.[೧೬]

ನಾಗಮಂಡಲ, ಢಕ್ಕೆ ಬಲಿಗಳಲ್ಲಿ ವೈದ್ಯರು ಚಿತ್ರಿಸುತ್ತಾ "ಬೆರ್ಮರ್ ಕೋರೆಹಲ್ಲು ದಪ್ಪ ಮೀಸೆ ದೊಡ್ಡ ಹೊಟ್ಟೆಯನ್ನು ಹೊಂದಿದ್ದರು ಎಂಬುದು ಆತನ ಅಸುರ ರೂಪವನ್ನು ಪೂಜಿಸುತ್ತದೆ.

ಉಳ್ಳಾಲವನ್ನು 1623ರಲ್ಲಿ ಸಂದರ್ಶಿಸಿದ ಪ್ರಿಯತ್ರೋ ತಾನು ಅಲ್ಲಿ ಕಂಡ ಬೆರ್ಮರ ವಿಗ್ರಹವನ್ನು ಹೀಗೆ ವರ್ಣಿಸಿದ್ದಾನೆ.[೧೭] "ಅಲ್ಲಿ ಚೊಕ್ಕವಾಗಿ ಕಟ್ಟಿದ ಒಂದು ಸಣ್ಣ ಗುಡಿ ಇತ್ತು.. ಅದರ ಒಳಗೆ ಭೂತದ (Devil) ವಿಗ್ರಹವಿತ್ತು ವಿಗ್ರಹವನ್ನು ಬಿಳಿಯ ಕಲ್ಲಿನಿಂದ ಮಾಡಿದ್ದರು. ಕಲ್ಲನ್ನು ಕೆತ್ತಿರಲಿಲ್ಲ. ವಿಗ್ರಹ ಒಂದು ಆಳು ಪ್ರಮಾಣಕ್ಕಿಂತ ದೊಡ್ಡದಾಗಿತ್ತು. ನಮ್ಮ ರೀತಿಯಲ್ಲಿ ವಿಗ್ರಹಕ್ಕೆ ಬಣ್ಣ ಹಚ್ಚಿ ಒಬ್ಬ

ಸುಂದರ ಯುವಕನಂತೆ ಕಾಣುವ ಹಾಗೆ ಮಾಡಿದ್ದರು. ತಲೆಯ ಮೇಲೆ ಕಿರೀಟವಿತ್ತು. ನಾಲ್ಕು ಕೈಗಳಿರುವುದು ಬಲಕೈಯಲ್ಲಿ ಚಕ್ರಕಾರದ ಎನೋ ಒಂದಿತ್ತು. ಇನ್ನೊಂದು ಕೈಯಲ್ಲಿ ಕಠಾರಿ ಇತ್ತು. ವಿಗ್ರಹದ ಕಾಲುಗಳ ಮಧ್ಯೆ ಉದ್ದನೆಯ ಗಡ್ಡಬಿಟ್ಟ ಬೆತ್ತಲೆ ಮನುಷ್ಯನ ವಿಗ್ರಹವಿತ್ತು ಅದರ ಕೈಗಳು ನೆಲಕ್ಕೆ ಊರಿದ್ದವು. ಪ್ರಾಣಿಯೊಂದು ನಡೆಯುವ ರೀತಿಯಲ್ಲಿ ಇದರ ಮೇಲೆ ಭೂತ ಕುಳಿತು ಸವಾರಿ ಮಾಡುತ್ತಿರುವಂತೆ ಕಾಣುತ್ತಿತ್ತು. ವಿಗ್ರಹದ ಬಲಭಾಗದಲ್ಲಿ ದೊಡ್ಡ ಮರವೊಂದರ ಒಣಗಿದ ಬುಡ ಕಾಣಿಸುತ್ತಿತ್ತು. ತೊಂದರೆಯ ನಿವಾರಣೆಗಾಗಿ ರಾಣಿ ಇಲ್ಲಿ ಗುಡಿ ಕಟ್ಟಿಸಿ, ಬ್ರಿಮೋರ್ (Brimor) ಎಂಬ ವಿಗ್ರಹವನ್ನು ಸ್ಥಾಪನೆ ಮಾಡಿಸಿದ್ದಾಳೆ. ಬ್ರಿಮೋರ್ ಎಂಬ ಭೂತ ಬಹಳ ದೊಡ್ಡ ಭೂತವಂತೆ. ಸಾವಿರಾರು ಭೂತಗಳಿಗೆ ಒಡಯನಂತೆ ಎಂದು ವಿವರಿಸುತ್ತಾನೆ".[೧೮]

ಇದು ಭೂತ ಬ್ರಹ್ಮನ ಕಲ್ಪನೆಯನ್ನು ಕೊಡುತ್ತಿದೆ. ಭೂತಬ್ರಹ್ಮನ ಕಲ್ಪನೆ ಹೊಂದುವಂತಹ ಒಂದು ವಿಗ್ರಹ ಉಡುಪಿಯ ವೀರಭದ್ರ ದೇವಾಲಯದಲ್ಲಿ ಇದೆ.[೧೯]

ಅನೇಕ ನಾಗಬನಗಳಲ್ಲಿ ಹಾಗೂ ಗರೋಡಿಗಳಲ್ಲಿ ಮೇಲ್ಭಾಗದಲ್ಲಿ ಮನುಷ್ಯನ ಮುಖವನ್ನು ಕೆಳಭಾಗ ಸರ್ಪಾಕಾರವನ್ನು ಹೊಂದಿರುವ ನಾಗಬ್ರಹ್ಮನ ಮೂರ್ತಿಗಳಿವೆ. ಈ ಮೂರ್ತಿಗಳು ನಾಗ ಹಾಗೂ ಬೆರ್ಮರ ಸಮನ್ವಯದಂತೆ ಭಾಸವಾಗುತ್ತದೆ.

## ಸಂದರ್ಭ ಸೂಚಿ

೧. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ – 'ನಾಗಬೆರ್ಮೆ', ಪುಟ ಸಂಖ್ಯೆ. ೭೫

೨. ಅದೇ ಪುಟ ಸಂಖ್ಯೆ. ೭೬

೩. ಅದೇ ಪುಟ ಸಂಖ್ಯೆ. ೭೭

೪. ಅದೇ ಪುಟ ಸಂಖ್ಯೆ. ೭೭

೫. ಅದೇ ಪುಟ ಸಂಖ್ಯೆ. ೭೭

೬. ಅದೇ ಪುಟ ಸಂಖ್ಯೆ. ೭೮

೭. ಡಾ॥ ಇಂದಿರಾ ಹೆಗ್ಗಡೆ – 'ತುಳುವರ ಮೂಲತಾನ ಆದಿ ಆಲಡೆ ಪರಂಪರೆ ಮತ್ತು ಪರಿವರ್ತನೆ" ಪುಟ ಸಂಖ್ಯೆ. ೪೯

೮. ಬನ್ನಂಜೆ ಬಾಬು ಅಮೀನ್ – ಮೋಹನ್ ಕೋಟ್ಯಾನ್ – ತುಳುನಾಡ ಗರೊಡಿಗಳ ಸಾಂಸ್ಕೃತಿಕ ಅಧ್ಯಯನ – ೮ ಪುಟ ಸಂಖ್ಯೆ. ೮೭

೯. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ – 'ನಾಗಬೆರ್ಮೆ', ಪುಟ ಸಂಖ್ಯೆ. ೭೯

೧೦. ವಾಮನ ನಂದಾವರ ಕೋಟಿ ಚೆನ್ನಯ ಜಾನಪದೀಯ ಅಧ್ಯಯನ ಪುಟ ಸಂಖ್ಯೆ. ೧೮೭

೧೧. ಡಾ। ಗುರುರಾಜ ಭಟ್–೧೯೭೫. ಗ್ರಂಥ ಪಟ್ಟಿ

೧೨. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ – 'ನಾಗಬೆರ್ಮೆ', ಪುಟ ಸಂಖ್ಯೆ. ೮೦

೧೩. ಪೀಟರ್ ಜೆ. ಕ್ಲಾಸ್, 'ತುಳುವ ದರ್ಶನ – ಪುಟ ಸಂಖ್ಯೆ. ೧೨೩.

೧೪. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ – 'ನಾಗಬೆರ್ಮೆ', ಪುಟ ಸಂಖ್ಯೆ. ೮೧

೧೫. ಅದೇ ಪುಟ ಸಂಖ್ಯೆ. ೮೧

೧೬. ಅದೇ ಪುಟ ಸಂಖ್ಯೆ. ೮೧

೧೭. ವಾಮನ ನಂದಾವರ ಕೋಟಿ ಚೆನ್ನಯ ಜಾನಪದೀಯ ಅಧ್ಯಯನ ಪುಟ ಸಂಖ್ಯೆ. ೧೮೭

೧೮. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ – 'ನಾಗಬೆರ್ಮೆ', ಪುಟ ಸಂಖ್ಯೆ. ೯೪

೧೯. ಲೀಲಾ ಭಟ್ – 'ಬೆಳಕಿನೆಡೆಗೆ' – ಸಂಶೋಧನಾ ಲೇಖನ, ಪುಟ ಸಂಖ್ಯೆ. ೪೧

೨೦. ಅದೇ ಪುಟ ಸಂಖ್ಯೆ. ೪೧

೨೧. ಅದೇ ಪುಟ ಸಂಖ್ಯೆ. ೪೧

೨೨. ಅದೇ ಪುಟ ಸಂಖ್ಯೆ. ೪೨

**********

# ಅಧ್ಯಾಯ – 4

# ನಾಗಬ್ರಹ್ಮರ ಆರಾಧನೆಯ ರೂಪಾಂತರ

ನಾಗಬ್ರಹ್ಮರ ಆರಾಧನೆಯು ಕಾಲದಿಂದ ಕಾಲಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ತನ್ನ ಹೆಸರನ್ನು ಬದಲಾಯಿಸಿಕೊಂಡು ಬಂದಿರುವುದು ಕಂಡು ಬರುತ್ತಿದೆ. ಭಕ್ತರ ಆಶಯ ಕಲ್ಪನೆಗೆ ತಕ್ಕಂತೆ ಬೆರ್ಮೆರ್ ಆಕಾರ ಪಡೆಯುತ್ತಾನೆ. "ಯಾವನು ಯಾವುದನ್ನು ಬಯಸುತ್ತಾನೋ ಯಾವುದನ್ನು ಕಲ್ಪಿಸಿ ತನ್ನ ಮನಸ್ಸನ್ನು ಕೇಂದ್ರೀಕರಿಸುತ್ತಾನೋ ಆಕಾರದಲ್ಲಿ ಆ ಗುಣದಲ್ಲಿ ಸಗುಣನಾಗಿ ಬ್ರಹ್ಮ ಗೋಚರನಾಗುತ್ತಾನೆ. 'ಓಂಕಾರ ಒಂದು ಆಧಾರ' ಎನ್ನುತ್ತೇವೆ. ವೇದಗಳು, ಉಪನಿಷತ್ತುಗಳು ಅಂತಹ ಬ್ರಹ್ಮನ್ ಆಗಿ ಬೆರ್ಮೆರ್ ಮತ್ತು ಪರಿವಾರ ಶಕ್ತಿಗಳು ತುಳುನಾಡಿನಲ್ಲಿ ಉಪಾಸನೆ ಪಡೆಯುತ್ತಿವೆ ಪರಿವರ್ತನೆಗೆ ಒಳಗಾದ ಬೇರೆ ಬೇರೆ ಅಲಡೆಗಳಲ್ಲಿ ಬೆರ್ಮೆರಿಗೆ ನೀಡಿದ ಸಂಕೇತಗಳೂ ಏಕ ತೆರನಾಗಿಲ್ಲ. ಮಾನವರ ವಿಭಿನ್ನ ಮನಸ್ಥಿತಿಗೆ ಅನುಗುಣವಾಗಿ ವಿಭಿನ್ನ ಕಲ್ಪನೆಯಲ್ಲಿ ಈ ಸಂಕೇತಗಳು ರೂಪುಗೊಂಡಿವೆ. ಅದು ಬೋಳು ಶಿಲೆಯಾಗಿರಬಹುದು. ಪದ್ಮ ಶಿಲೆಯಾಗಿರಬಹುದು, ಮರದ ಮಂಡಿಗೆ ಆಗಿರಬಹುದು. ಅರ್ಧಮಾನವ ರೂಪಿ ನಾಗಶಿಲ್ಪ ಆಗಿರಬಹುದು ಅಥವಾ ಕುದುರೆ ಮೇಲೆ ಕುಳಿತ ಯೋಧನೇ ಬೆರ್ಮೆರ್ ಆಗಿರಬಹುದು. ಒಟ್ಟಿನಲ್ಲಿ ನಿರಾಕಾರ ರೂಪಿಯನ್ನು ಸಾಕಾರಗೊಳಿಸಿಗೊಳ್ಳಲು ಪ್ರಯತ್ನಿಸಿದೆ. ವಿಭಿನ್ನ ಪ್ರತಿಮೆಯನ್ನು ಕಾಣಬಹುದು. ಶಿಷ್ಟ ಜನರಲ್ಲಿ ಈ ಹೊತ್ತಿಗಾಗಲೇ ಬೆರ್ಮೆರ್ ಎಂದರೆ ಮೂಲತಃ ಮರಿ ನಾಗ ಸರ್ಪ ಎಂಬುದು ಮರೆಯಾಗಿ ಬೆರ್ಮೆರ್ ಸ್ವತಂತ್ರ ಶಕ್ತಿಯಾಗಿ ಬೆಳೆದಿರಬೇಕು. ತುಂಡು ಕಲ್ಲಿನ ಆರಾಧನೆ ನಾಗಶಿಲ್ಪಗಳ ರಚನೆಗೆ ಮೊದಲೇ ರೂಢಿಗೆ ಬಂದಿರಬೇಕು. ಈಗಲೂ ಅದ್ಯಪಾಡಿ, ಕವತಾರು, ಮೂಲತಾನದ ಕಾಡು. ಪಡುಬಿದ್ರಿ, ಮೂಲತಾನ, ಮುಟ್ಲುಪಾಡಿ, ಮೂಲತಾನದ, ಇರುಮಲೆ, ಬೆಟ್ಟ ಮುಂತಾದ ಅನೇಕ ಕಡೆ ಬೆರ್ಮೆರ್ ತುಂಡುಕಲ್ಲನ್ನು ಸಂಕೇತಿಸುವ ಸ್ಥಳಗಳನ್ನು ಗಮನಿಸಬಹುದು.[೧]

ಕೆಲವು ಪುರಾತನ ಆಲಡೆಗಳಲ್ಲಿ ಮೇಲ್ನೋಟಕ್ಕೆ ಏನೂ ಕಾಣುವುದಿಲ್ಲ. ಆ ಕಾಲದಲ್ಲಿ ಜೀವಂತ ನಾಗನನ್ನು ಪ್ರಾರ್ಥಿಸುತ್ತಿದ್ದರೋ ಏನೋ ಮೇಲ್ನೋಟಕ್ಕೆ ಇವು ನಿರಾಕಾರ ನಿರ್ಗುಣ ಆಲಡೆಗಳು. "ದೇವರ ಕಾಡು" ಎಂದು ಗುರುತಿಸಲ್ಪಟ್ಟು ಬನಗಳಲ್ಲಿ ಪ್ರಕೃತಿಯ ಮಡಿಲಲ್ಲಿ ನಿಂತಾಗ "ಸರ್ವಂ ಖಲ್ವಿದಂ ಬ್ರಹ್ಮ" ಎಂಬುದು ನೆನಪಾಗುತ್ತವೆ. ಆಕಾಶದಡಿ ಇರುವ ಕಾಡಿನ ಇಂತಹ ಕೆಲವು ಕ್ಷೇತ್ರಗಳನ್ನು ರೂಪ ಇಲ್ಲ, ಆಕಾರ ಇಲ್ಲ, ಗುಣ ಇಲ್ಲ, ವಾಸನೆ ಇಲ್ಲ, ನಿರ್ಗುಣ, ನಿರಾಕಾರ ನಿರ್ವಯ ನಿರಾಕಾಶ ಆ ಕ್ಷಣದಲ್ಲಿ "ಸರ್ವಂ ಬ್ರಹ್ಮಮಯಂ" ಆಗಿ ಕಾಣುತ್ತದೆ. ವೇದಗಳ ಬ್ರಹ್ಮನ್ ಕಲ್ಪನೆ. ವೇದಾ ಕಾಲಕ್ಕೂ ಮೊದಲು ಜನಪದವೇ ಇತ್ತು ಎಂಬುವುದು ಭಾಸವಾಗುತ್ತದೆ.[೨] ಲಿಖಿತ ಸಾಹಿತ್ಯಕ್ಕೂ ಜನಪದವೇ ಮೂಲ ಮತ್ತು ಪ್ರೇರಣೆ. ಕೆಲವು ಬೆರ್ಮೆರ ಅದಿ ಅಲಡೆಯ ಮೂಲ ಸ್ವರೂಪದ ತಾಣಗಳಲ್ಲಿ ನಾಗಶಿಲ್ಪಗಳೂ ಇಲ್ಲ ಮುಂದೆ ಕೆಲವು ಬೆರ್ಮೆರ ತಾಣಗಳಲ್ಲಿ ಆದ ಬದಲಾವಣೆಗಳೂ ಹಂತ ಹಂತವಾಗಿದೆ. ವನ, ತುಂಡು ಕಲ್ಲು, ಹುತ್ತ ನಂತರ ಗುಂಡ. ಮುಂದೆ ಗುಡಿ ಹಾಗೆಯೇ ಗುಡಿಯೊಳಗೂ

ಶೂನ್ಯ; ಯಾವುದೇ ಸಂಕೇತ ಇಲ್ಲ ಮತ್ತು ಕೆಲವಡೆ. ಗುಡಿಯೊಳಗೆ ಹುತ್ತ ಕೆಲವಡೆ ಗುಡಿಯೊಳಗೆ ಮಣಿಮಂಚ, ಕೆಲವಡೆ ಉಯ್ಯಾಲೆ, ಉಯ್ಯಾಲೆಯಲ್ಲೂ ಬರಿಗಣ್ಣಿಗೆ ಗೋಚರವಾಗದ ಶಕ್ತಿ ಮುಂದೆ ಕೆಲವಡೆ ಉಯ್ಯಾಲೆಯನ್ನು ಬೆರ್ಮೆರನ್ನು ಸಂಕಲ್ಪಿಸುವ ಪದ್ಧತಿ ಬೆಳೆಯಿತು. ಮುಂದಿನ ಬೆಳವಣಿಗೆ – ಕೆತ್ತಿದ ಚೌಕದ ಶಿಲೆ, ಲಿಂಗರೂಪ – ಹೀಗೆ ಭಕ್ತರ ಆಶಯಕ್ಕೆ ತಕ್ಕಂತೆ ತುಳುವರು 'ಬೆರ್ಮೆರ್', 'ನಾಗಬೆರ್ಮೆರ್' ವೇದಗಳ ಬ್ರಹ್ಮನಂತೆ ನಿರಂತರವಾಗಿ ಸಗುಣ ಸಾಕಾರ ರೂಪ ಪಡೆಯುತ್ತಿದ್ದಾನೆ.[೩]

ಸಿರಿಯ ಅಲಡೆ ಮೂಲ ಬ್ರಹ್ಮಸ್ಥಾನಗಳು ಈಗಲೂ ಹೆಚ್ಚಾಗಿ ಕಾಡಿನೊಳಗೆ ಇದೆ. ಕವತಾರು (ಕಾಡಿನ ಬ್ರಹ್ಮಸ್ಥಾನ) ಮನಿಯಾಲಾ ಇಲ್ಲೆಲ್ಲಾ ಪ್ರಕೃತಿಯೇ ದೇವರು. ಯಾವ ಬದಲಾವಣೆಯು ಮಾಡಿಲ್ಲ. ಮನಿಯಾಲ ಆಲಡೆ ದೇವಾಲಯದ ಮುಂದೆ ಆದಿಯ ಬರ್ಮೆರ ಆಲಡೆ ಮೂಲಸ್ಥಾನ "ಇರುಮಲೆ" ಇದೆ. ನಾಗಬೆರ್ಮೆರ ತಾಣಗಳಲ್ಲಿ ಹೆಚ್ಚಿನ ಕಡೆ ಯಾವ ಬದಲಾವಣೆಯೂ ಆಗಿಲ್ಲ. ಕಾಡಿನ ಮರದ ಕೆಳಗೆ "ಮುರಿ"ಗಳನ್ನು ಕಾಣಬಹುದು. ಅನಂತಾಡಿ ಬಾಕಿ ಅತ್ತಿಮಾರ್ ಮೂಲಸ್ಥಾನ "ಮುರಿ" ಇದ್ದ ಬನ ಇಲ್ಲಿ ಮುಡಿಂಜ ಇದ್ದ ಕುರುಹು ಇದೆ. ಹೆಬ್ರಿ ಬಳಿ ಚಾರದಲ್ಲಿ ಅನೇಕ ನಾಗಬ್ರಹ್ಮಸ್ಥಾನಗಳಿವೆ. ಇದರಲ್ಲಿ ಕಾಡ್ಯರ ಬ್ರಹ್ಮಸ್ಥಾನಗಳೂ ಇವೆ. ಕಾಡ್ಯರು ಮತ್ತು ಮುಗೇರರು ಅರ್ಚನೆ ಮಾಡುವ ಬೇರೆ ಬೇರೆ ನಾಗ ಬ್ರಹ್ಮಸ್ಥಾನ. ಅಲ್ಲದೇ ಬಲ್ಲವರು ಅರ್ಚಕರಾಗಿ ದರ್ಶನ ಪಾತ್ರಿಗಳಾಗಿರುವ ನಾಗ ಬ್ರಹ್ಮಸ್ಥಾನವೂ ಇದೆ.[೪]

ಕುಕ್ಕೆ ಸುಬ್ರಹ್ಮಣ್ಯನ ಗರ್ಭಗುಡಿಯ ಒಳಗೆ ಇರುವುದು ಹುತ್ತ. ಮಲೆಕುಡಿಯರ ಪ್ರಕಾರ ಇದು ಅವರ ಮೂಲತಾಣ. ಕುಕ್ಕೆ ಅನೇಕರಿಗೆ ಮೂಲತಾಣ ಆದರೂ ಮಲೆಕುಡಿಯರಲ್ಲಿ ಇಲ್ಲಿಗೆ ಸಂಬಂಧಿಸಿದಂತೆ ಕೆಲವು ವಿಶಿಷ್ಟ ಆಚರಣೆಗಳು ಉಳಿದು ಬಂದಿದೆ. 'ಸುಬ್ರಹ್ಮಣ್ಯದಲ್ಲಿ ಅನೇಕ ದೇವಿ ಗುಡಿಗಳು ಇವೆ. ಇಲ್ಲಿ ಸುಬ್ರಹ್ಮಣ್ಯನ (ಸ್ಕಂದ) ತಾಯಿಯ ಪೂಜೆ "ಅಬ್ಬಗ ದಾರಗೆ" ಎಂಬ ದೈವದ ರೂಪವಾಗಿ ನಡೆಯುತ್ತಿದೆ. ಇದಕ್ಕೆ ಊರಿನ ಗೌಡರೆಲ್ಲರೂ ಪ್ರಾಣಿ ಬಲಿ ಕೊಡುತ್ತಾರೆ. ಪಡುಬಿದ್ರಿಯಲ್ಲಿ ನೈಸರ್ಗಿಕ ಪರಿಸರದಲ್ಲಿ ಖಡ್ಗೇಶ್ವರಿಯ ಬ್ರಹ್ಮಸ್ಥಾನ ಇದೆ.[೫]

ಬಿರ್ಮೆರೆ ಗುಂಡ ಪರಿವರ್ತನೆಗಳಿಗೆ ಒಳಗಾಗುತ್ತಾ ಹೋಯಿತು. ತುಳುವರ ಕಲ್ಪನೆಯ 1001 ಹೆಡೆ "ನಾಗ ಬೆರ್ಮೆರ್" ಆಗಿ ನಾಗಗಳಲ್ಲಿ ಶ್ರೇಷ್ಠತೆಯನ್ನು ಪಡೆದ ಆಲಡೆ ಬೆರ್ಮೆರ್ ತುಳುನಾಡಿನ ಜನತೆಯ ಮೇಲೆ ಬೀರಿರುವ ಮಾಂತ್ರಿಕ ಶಕ್ತಿಯಿಂದ ವೈದಿಕ ಸಂಪ್ರದಾಯದ ವೈಷ್ಣವ ಬ್ರಾಹ್ಮಣ ಅರ್ಚಕರೂ ಈ ಕಡೆ ಗಮನ ಹರಿಸುವಂತಾಯಿತು. ತುಳುವರ ಬಿರ್ಮೆರ್ ಬ್ರಹ್ಮಲಿಂಗೇಶ್ವರನಾಗಿ ಅರ್ಚನೆ ವೈಷ್ಣವಾಗಮನ ಸಂಪ್ರದಾಯಕ್ಕೆ ಪರಿವರ್ತನೆಗೊಂಡು ಬ್ರಹ್ಮಸ್ಥಾನಗಳಲ್ಲಿ ವೈದಿಕ ರೀತಿಯಲ್ಲಿ ಪೂಜೆ ಪಡೆದು ದೇವರಾದ. ಆದರೆ ಈಶ್ವರ ಆಗಿಲ್ಲ. ಆದರೂ ಕೆಲವರು ಇವನನ್ನು ಈಶ್ವರನೇ ಎನ್ನುತ್ತಾರೆ. ಆನತಿಗೆ ವೈದಿಕ ದೇವತೆಗಳಂತೆ ಸ್ವತಂತ್ರ ಸ್ಥಾನ ಸಿಕ್ಕಿದರೆ ಆಲಡೆಗಳಲ್ಲಿ ಈಶ್ವರನ ಲಿಂಗ ಸ್ಥಾಪಿಸುವ ಅಗತ್ಯ ಇರಲಿಲ್ಲ. ಹೀಗೆ ಬ್ರಹ್ಮಲಿಂಗೇಶ್ವರನಾದ.[೬]

ಆಧುನಿಕ ಬ್ರಹ್ಮಸ್ಥಾನದೊಳಗೆ ಗುಂಡದೊಳಗೆ ಲಿಂಗ ಪ್ರತಿಷ್ಠಾಪಿಸಿ ನಾಗಮಂಡಲ ಅಥವಾ ಬ್ರಹ್ಮಮಂಡಲ ಮಾಡುತ್ತಾರೆ. ಅಲಡೆಯ ಬಿರ್ಮೆರ್ ಹಾಗೂ ಪರಿವಾರ ದೈವಗಳ ಭಕ್ತರ ಭಾವನೆಗೆ ತಕ್ಕಂತೆ ಸಾಕಾರ, ಸಗುಣ ರೂಪಿಯಾಗಿ ಬದಲಾವಣೆಗೊಳ್ಳುತ್ತಿರುವುದನ್ನು ನಾವು ಕಾಣಬಹುದು. ಅಮೂರ್ತತೆಯಿಂದ ಮೂರ್ತತೆಗೆ ಇದನ್ನು ಹೀಗೆ ಕುಟುಂಬ ಸದಸ್ಯರ ವ್ಯಾಪ್ತಿಯಲ್ಲಿ ಇದ್ದ ಬಿರ್ಮೆರ ಬನ ಬ್ರಹ್ಮಲಿಂಗೇಶರ ಆಗಿ ಜನಪದ ಸಂಪ್ರದಾಯದಿಂದ ಆಗಮ ಸಂಪ್ರದಾಯಕ್ಕೆ ಹೊರಳುತ್ತದೆ. "ಆಲಡೆ ಬೆರ್ಮೆರ ಬನ" ಆಲಡೆ ಬ್ರಹ್ಮಲಿಂಗೇಶ್ವರ ದೇವಸ್ಥಾನ" ಆಗಿ ಪರಿವರ್ತನೆಗೊಳ್ಳುತ್ತಿದೆ. ಕೆಲವು ಸಂದರ್ಭದಲ್ಲಿ ಇಂತಹ ಪರಿವರ್ತನೆ ಆಡಳಿತ ವರ್ಗ ಹಾಗೂ ಅರ್ಚಕ ವರ್ಗಕ್ಕೆ ಹೊಸ ಆದಾಯ ತರುವ ಮೂಲವೂ ಆಗುತ್ತದೆ. ಕವತ್ತಾರು, ನಂದಳಿಕೆ, ಹಿರಿಯಡ್ಕ ಮುಂತಾದುವು ಹೀಗೆಯೇ ಪರಿವರ್ತನೆ ಆಗಿರುವುದು. ಅನೇಕ ಸಂದರ್ಭದಲ್ಲಿ ಆಗಮ ಸಂಪ್ರದಾಯಕ್ಕೆ ಪಲ್ಲಟಗೊಂಡ ದೇವಸ್ಥಾನಗಳ ನಿತ್ಯಪೂಜೆ ಮಾಡಲು ಆರ್ಥಿಕ ತೊಂದರೆ ಎದುರಾಗುತ್ತದೆ. ಇಂತಹ ತಾಣಗಳಲ್ಲೂ ಕೆಲವೆಡೆ ಬ್ರಹ್ಮಸ್ಥಾನದ ಹೊರಗೆ ಇದ್ದ ಹುತ್ತದ ಮೂಲ ಬನವನ್ನು ಅಗೆಯದೆ ಉಳಿಸಿಕೊಂಡಿದ್ದಾರೆ.. ಎಂದು ತುಳುವೆರ ಮೂಲತಾಣ. "ಆದಿ – ಆಲಡೆ ಪರಂಪರ ಮತ್ತು ಪರಿವರ್ತನೆ" ಡಾ॥ ಇಂದಿರಾ ಹೆಗ್ಗಡೆ ಅವರ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ.[೭]

ಶ್ರೀಮತಿ ಇಂದಿರ ಹೆಗ್ಗಡೆಯವರು ಬೆರ್ಮನ ಆರಾಧನೆ ನಡೆಯುವ ಸುಮಾರು 25 ಸ್ಥಳಗಳನ್ನು ಗುರುತಿಸಿದ್ದಾರೆ. ಉಡುಪಿ ತಾಲೂಕಿನ ಬೆಳಪು ಬರ್ಪಣಿ, ಪಾಂಗಳ ಮತ್ತು ಕಲ್ಯ ಬೀಡಿನಲ್ಲಿ ಬೆರ್ಮನ ಹೆಸರಿನಲ್ಲೇ ಆರಾಧನೆ ನಡೆಯುತ್ತದೆ. ಬೆಳ್ತಂಗಡಿ ತಾಲೂಕಿನ ನಿಡುಗಲ್ಲೂ ಅತ್ರಿ ಜಾಲ್ ಕುತ್ರೊಟ್ಟು ಮತ್ತು ಉರುಂಬಿ ತೋಟದಲ್ಲಿ ಬ್ರಹ್ಮಲಿಂಗೇಶ್ವರ ಎಂಬ ಹೆಸರಿನಲ್ಲಿ ನಡೆಯುತ್ತದೆ. ಕಾರ್ಕಳ ತಾಲೂಕಿನ ದರೆಗುಡ್ಡೆ ಬೊಲೊಟ್ಟು ಬೆಳ್ವಾಯಿ ಕಾನ, ಉರ್ಕಿದೊಟ್ಟು ಪೇರೂರು, ಕಚ್ಚರಪರಾಡಿಯಲ್ಲಿ ಬೆರ್ಮನ ಹೆಸರಿನಲ್ಲಿ ನಡೆದರೆ, ಮುಟ್ಟುಪಾಡಿ ಮತ್ತು ಹೆಬ್ರಿಯಲ್ಲಿ ಅರ್ಧನಾರೀಶ್ವರ ಮಣಿಕಲ್ಲು ಮಜಲೊಟ್ಟೊ ಬೀಡು, ನಂದಳಿಕೆ, ಅಂಗರ ಜಾಲ, ಬರ್ಕೆ, ಬೆಣ್ಣೆ ಕುದುರು, ಅಲಡೆಗಳಲ್ಲಿ ಬ್ರಹ್ಮಲಿಂಗೇಶ್ವರ ಎಂಬ ಹೆಸರಿನಿಂದ ಬೆರ್ಮ ಆರಾಧಿಸಲ್ಪಡುತ್ತಾನೆ.[೮] ಹಿರಿಯಡ್ಕದಲ್ಲಿ ಬೆರ್ಮನ ಖಡ್ಗೇಶ್ವರ ಎಂಬ ಹೆಸರನ್ನು ಹೊಂದಿದ್ದಾನೆ. ಮಂಗಳೂರು ತಾಲೂಕಿನ ಕವತ್ತಾರು, ಕೊಡಿಪಾಡಿ, ಬರ್ಕೆ ಮತ್ತು ಕಟ್ಣಮನೆ. ಅತ್ತಾವರ ಬರ್ಕೆ ಕೇಂದ್ರಗಳಲ್ಲಿ ಬ್ರಹ್ಮಲಿಂಗೇಶ್ವರನೆಂಬ ಹೆಸರಿನಿಂದ ನೆಲೆಸಿದ್ದಾರೆ. ಮದ್ಯ ಬೀಡಿನಲ್ಲಿ ಅರ್ಧನಾರೀಶ್ವರನೆಂದೂ ಕಂಡೇವಿನಲ್ಲಿ ಬೆರ್ಮ ಉಲ್ಲಾಯನೆಂದೂ ಕರೆಯಲ್ಪಡುತ್ತಾನೆ. ಬಂಟ್ವಾಳದ ಬೆರ್ಮರೆ ಕೂಟೇಲಿನಲ್ಲಿ ಬೆರ್ಮೆರ ಗುಡಿ ಇದೆ. ಪುತ್ತೂರಿನ ನಿಡ್ಡಳ್ಳಿಯಲ್ಲಿ ಬೆರ್ಮೆರ ಗುಂಡವಿದೆ. ಪೇಜಾವರ ಮತ್ತು ತೋಕೂರು ಗುತ್ತಿನಲ್ಲಿಯೂ ಬೆರ್ಮರ ಆರಾಧನೆ ನಡೆಯುತ್ತಿತ್ತು.[೯]

ಬೆರ್ಮರ ಕಾಲದಿಂದ ಕಾಲಕ್ಕೆ ಪ್ರದೇಶದಿಂದ ಬೆರ್ಮಲಿಂಗೇಶ್ವರ, ಅರ್ಧನಾರೀಶ್ವರ, ಖಡ್ಗೇಶ್ವರ ಮುಂತಾದ ನಾಮ ರೂಪಗಳನ್ನು ಧರಿಸಿ ಪ್ರಸ್ತುತ, ನಾಗಬ್ರಹ್ಮನಾಗಿದ್ದಾನೆ. ಯಕ್ಷಮಾತೆ, ಲೆಕ್ಕೆಸಿರಿ ಭೂತ

ಸ್ವರೂಪವನ್ನು ಪಡೆದು ಸಂಸ್ಕೃತಾನುಕರಣದಿಂದ ರಕ್ತೇಶ್ವರಿಯಾಗಿದ್ದಾಳೆ.[೧೦] ಡಾ. ಪೀಟರ್ ಜೆ. ಕ್ಲಾಸ್ ಈ ಬಗ್ಗೆ "ಅಳುಪರ ಸುಮಾರು ಸಾವಿರ ವರ್ಷಗಳ ಅರಸೊತ್ತಿಗೆಯ ಕೊನೆಯವರೆಗೆ ಅಂದರೆ ಸುಮಾರು 14ನೇ ಶತಮಾನದ ಕೊನೆಯವರೆಗೆ ಬೆರ್ಮನು ವೈದಿಕ ಬ್ರಹ್ಮನಾಗಿ ಈ ನೆಲದಲ್ಲಿ ಚಿತ್ರಿತವಾಗಿಲ್ಲ ಇದು ವೈದಿಕ ವರ್ಗದವರಿಂದ ನಡೆದ ದೇವತೆಗಳ ಪುನರ್ ವರ್ಗೀಕರಣದ ಫಲ ಹಾಗೂ ನಾಗನನ್ನು ಪೂಜಿಸುವ ಅಧಿಕಾರವನ್ನು ಬ್ರಾಹ್ಮಣರು ಸ್ವೀಕರಿಸಿದ ಕಾರಣವಾಗಿರಬೇಕು ಎನ್ನುತ್ತಾರೆ.[೧೧]

ಬೆರ್ಮರನ್ನು ಒಂದು ದೈವ (ಭೂತ)ವೆಂದು ಪರಿಗಣಿಸಿ ಕೋಲ ಕ್ರಮವಿದೆ. ಈ ಭೂತಕ್ಕೆ ನಲಿಕೆ ಜನಾಂಗದವರು ಕಟ್ಟುತ್ತಾರೆ. ಬಂಟ್ವಾಳ ಪುತ್ತೂರು ತಾಲೂಕಿನಲ್ಲಿ ಈ ಪದ್ಧತಿ ಇದೆ. ಪುತ್ತೂರು ತಾಲೂಕಿನ ಕೆದಂಬಾಡಿಯ ಮುಂಡಾಲ ಗುತ್ತಿನಲ್ಲಿ ಬೆರ್ಮರ ಕೋಲ ವರ್ಷಂಪ್ರತಿ ನಡೆಯುತ್ತದೆ. ಭಂಡಾರದ ಮನೆಯಲ್ಲಿ ಉಯ್ಯಾಲೆ ಇರುತ್ತದೆ. ಉಯ್ಯಾಲೆ ಮೇಲೆ ಬೆರ್ಮರ ಆಯುಧಗಳನ್ನಿಟ್ಟಿರುತ್ತಾರೆ. ನಂತೂರು ಕಾಸರಗೋಡಿನ ಕುಳೂರು ಖಂಡಿಗೆ ಮುಂತಾದ ಕಡೆ ಬೆರ್ಮರಿಗೆ ನೇಮ ನಡೆಯುತ್ತದೆ. ಖಂಡಿಗೆಯಲ್ಲಿ ಬೆರ್ಮರಿಗೆ ಪ್ರತ್ಯೇಕ ತಾಣವಿದೆ. ಕಾನನದೊಳಗೆ ಉಯ್ಯಾಲೆ ಇದೆ. ಬೀಡಿನ ಒಳಗಡೆಗೂ ಉಯ್ಯಾಲೆ ಇದೆ. ಈ ಬೆರ್ಮನನ್ನು ಧರ್ಮರಸು ಎನ್ನುತ್ತಾರೆ. ಧರ್ಮರಸು ಉಲ್ಲಾಯ ಖಡ್ಗಧಾರಿಯಾಗಿ ಕುದುರೆ ಮೇಲೆ ಕುಳಿತಿದ್ದಾನೆ.[೧೨]

ಆಲಡೆಗಳಲ್ಲಿ ಬಂಟರು ಅಥವಾ ಜೈನರು ಮುಖ್ಯಸ್ಥರಾಗಿರುತ್ತಾರೆ. ಕೆಲವೆಡೆ ಬ್ರಾಹ್ಮಣರು ಮುಖ್ಯಸ್ಥರಾಗಿರುತ್ತಾರೆ ಇದೆ. ಇವರ ಜಾತಿಯವರು ಕೂಡಾ ಕೋಲ ಮತ್ತಿತರ ಆಚರಣೆಗಳಲ್ಲಿ ಪಾಲು ಪಡೆಯುತ್ತಾರೆ (ಇಂದಿರಾ ಹೆಗ್ಗಡೆ –2004) ಗರಡಿಗಳನ್ನು ಬಿಟ್ಟರೆ – ಉಳಿದಂತೆ ಆಲಡೆಗಳಲ್ಲಿ ಗುಂಡ ತಾಣಗಳನ್ನು ಬೆರ್ಮರ ಆರಾಧನೆ ನಡೆಯುತ್ತಿದೆ. ಕುಂದಾಪುರದ ಕಡೆ ಪಾಣಾರ ಜಾತಿಯವರು ಪಾಣಾರಾಟ ಎಂಬ ಕೋಲ ನಡೆಸುತ್ತಾರೆ.[೧೩] ಈ ಕೋಲವನ್ನು ನಡೆಸಿ ಕೊಡುವವರು ಹೆಚ್ಚಾಗಿ ನಾಡವರು, ಬಿಲ್ಲವರು ಮತ್ತು ಮೊಗವೀರರು ಇದರಲ್ಲಿ ಪಾಲ್ಗೊಳ್ಳುತ್ತಾರೆ. ಪಾಣಾರಾಟದಲ್ಲಿ ಮುಖ್ಯವಾಗಿ ಮೂರು ಭಾಗಗಳಿರುತ್ತದೆ. ಸ್ವಾಮಿ ಕೋಲ, ಭೂತ ಕೋಲ ಮತ್ತು ನಾಗ ಕೋಲ ಇವುಗಳಲ್ಲಿ ನಡೆಸುವ ಸ್ವಾಮಿ ಕೋಲವು ಬೆರ್ಮರ ಆರಾಧನೆ ಅದರ ಸ್ವಾಮಿ ಎಂದರೆ, ಬೆರ್ಮರು ಎಂಬ ವಿಚಾರ ದೈವಕ್ಕೆ ಕಟ್ಟುವ ಪಾಣರರಿಗಾಗಲಿ ನಡೆಸುವವರಿಗಾದರೂ ತಿಳಿಯದಿರುವುದು ವಿಶೇಷ.[೧೪]

ಸ್ವಾಮಿ ಕೋಲ ನಡೆಸುವವರು ತಮ್ಮ ಮನೆಯ ಪಕ್ಕದಲ್ಲಿ ತಾತ್ಕಾಲಿಕವಾಗಿ ಒಂದು ಸ್ವಾಮಿ ಮನೆ ಕಟ್ಟಿಸುತ್ತಾರೆ. ಇದಕ್ಕೆ ತಾನೆ ಪಾಣರಾಟ ನಡೆಯುವ ದಿನ ಮೊದಲ ಕಾರ್ಯ ಕಳಶ ಸ್ಥಾಪನೆ ಶುದ್ಧಾಚಾರದಲ್ಲಿರುವ ಮನೆಯ ಯಜಮಾನ ಕಂಚಿನ ಗಿಂಡೆಯಲ್ಲಿ ಬಾವಿಯಿಂದ ನೀರೆತ್ತಿಕೊಂಡು ಬರಲು ಹೋಗುತ್ತಾನೆ. ಆಗ ಕುಟುಂಬದ ಸದಸ್ಯರೆಲ್ಲ ಅವನನ್ನು ಹಿಂಬಾಲಿಸುತ್ತಾರೆ. ಡಕ್ಕೆ ತಂಬರೆ, ಕೊಂಬು ವಾಲಗದ ಹಿಮ್ಮೇಳದಲ್ಲಿ ಕಲಶದ, ನೀರು ಬಾವಿ ಇಲ್ಲವೇ ಕೆರೆಯಿಂದೆತ್ತಿ ತರಲಾಗುತ್ತದೆ.

ತಾಣದೊಳಗೆ ಒಂದು ಚಿಕ್ಕ ಬೆಂಚನ್ನು ಇಟ್ಟಿರುತ್ತಾರೆ. ಇಲ್ಲವೇ ಸ್ವಲ್ಪ ಎತ್ತರದಲ್ಲಿ ಒಂದು ಮರದ ಹಲಗೆ ಇಟ್ಟಿರುತ್ತಾರೆ. ಅದರ ಮೇಲೆ ಮಡಿ ಬಟ್ಟೆ ಹಾಸಿರುತ್ತಾರೆ. ಈ ಬಟ್ಟೆಯ ಮೇಲೆ ಸ್ವಾಮಿಯ ಮಂಡಿಗೆಯನ್ನಿಡುತ್ತಾರೆ. ಸ್ವಾಮಿ ಮಂಡಿಗೆ ಎಂದರೆ ಹಲಸಿನ ಮರದಲ್ಲಿ ಕೆತ್ತಿ ಮಾಡಿದ ಒಂದು ಲಿಂಗಾಕೃತಿ ಕೆಲವು ಕಡೆ ಇಂತಹ ಕಲ್ಲಿನ ಆಕೃತಿಗಳು ಇರುತ್ತದೆ. ಬೇರೆ ದೈವಗಳ ಬಿಂಬಗಳ ಮಧ್ಯೆ ಈ ಮಂಡಿಗೆಯನ್ನುಇಟ್ಟಿರುತ್ತಾರೆ. ಈ ಸ್ವಾಮಿ ಮನೆ (ತಾನ)ಯ ಎದುರು ಭಕ್ತಾದಿಗಳಿಗೆ ಕುಳಿತುಕೊಳ್ಳುವ ವ್ಯವಸ್ಥೆ ಮಾಡಿರುತ್ತಾರೆ.[೧೫] ಈ ರೀತಿಯಾಗಿ ಹಲವು ವಿಧಗಳಿಂದ ಬೆರ್ಮರನನ್ನು ಆರಾಧನೆ ಮಾಡಲಾಗುತ್ತಿದೆ.

ಸಿರಿ ಆಲಡೆ ಇಲ್ಲದ ಕಡೆಯೂ ಬೆರ್ಮೆರ್ ಚಾವಡಿ ದೈವವಾಗಿ ಇದೆ. ಪುತ್ತೂರು ತಾಲೂಕಿನ ಮುಂಡಾಲ ಗುತ್ತಿನ ಚಾವಡಿಯ ಉಜ್ಜಾಲ್‌ನಲ್ಲಿ ಬೆರ್ಮೆರ್ ದೈವದ ಮೊಗ ತ್ರಿಶೂಲ, ಬಿಲ್ಲು ಬಾಣಗಳು ಇವೆ. ಈ ಮನೆಯ ಹೊರ ಅಂಗಳದಲ್ಲಿ "ಬಿರ್ಮೆರ್‌ನ ಕಲ್ಲು" ಇದೆ. ವರ್ಷಕ್ಕೆ ಮೂರು ಬಾರಿ ಬೆರ್ಮರಿಗೆ ಇಲ್ಲಿ ಕೋಲ ಆಗುತ್ತಿದೆ. ಈ ಕೋಲದಲ್ಲಿ ಬೆರ್ಮೆರ್ ಕಲ್ಲಿನ ಮೇಲೆ ನಿಂತು ಕಾಡಿನ ಕಡೆಗೆ ಬಾಣ ಬಿಡುತ್ತಾನೆ. ಇದು ಬೆರ್ಮೆರ್ ಬೇಟೆಯಾಡುವ ಸಂಕೇತಿಕ ಆಚರಣೆ ಬಂಟ್ವಾಳ ತಾಲೂಕಿನ ಕೊರಿಯಾಲ ಗುತ್ತಿನ ಅಂಗಳದಲ್ಲಿ ಬೆರ್ಮೆರ ಗುಂಡ. ಇತರ ಭೂತ, ದೈವಗಳ ಗುಡಿಯಂತೆ ಇದೆ. ಧರ್ಮರಸು ಉಲ್ಲಾಯನ ರೂಪದಲ್ಲಿ ಧರ್ಮರಸು ದೈವ ಆಗಿ ಬೆರ್ಮೆರ ಚಾವಡಿಯಲ್ಲಿ ನೆಲೆ ಕಂಡು ಕೊಂಡಿದ್ದಾನೆ. ಈತನಿಗೆ ಮೀಸೆ ಇರುವ ಉಭಯಲಿಂಗಿ, ಪ್ರಕೃತಿ ಪುರುಷನ ಏಕತೆ ಎದೆಯ ಮೇಲ್ಭಾಗ ಪುರುಷ, ಮೀಸೆ ಇದೆ. ಮೊಲೆಕಟ್ಟು ಇರುವುದಿಲ್ಲ.[೧೬]

ಖಂಡಿಗೆಯಲ್ಲಿ ಬೆರ್ಮೆರು ಏಳು ಗಂಗೆಯಿಂದ ಬಂದ ಧರ್ಮರಸು ಉಲ್ಲಾಯ, ಸಿರಿ ಕುಮಾರರಿಗೆ ಮಾತ್ರವಲ್ಲ ಎಲ್ಲ ಭಕ್ತರಿಗೂ ಉಲ್ಲಾಯ ಅಂದರೆ ಒಡೆಯ ರಕ್ಷಕ. 'ಉಲ್ಲಾಲ್ತಿ' ಎಂದರೆ ಒಡತಿ, ರಕ್ಷಕಿ ಮೇಲ್ವರ್ಗದ ಗುತ್ತು ಬೀಡುಗಳ ಪುರುಷರನ್ನು 'ಉಲ್ಲಾಯ' ಎಂದೂ ಮಹಿಳೆಯರನ್ನು 'ಉಲ್ಲಾಲ್ತಿ' ಎಂದು ರೂಢಿಯಲ್ಲಿ ದಲಿತರು ಕರೆಯುತ್ತಾರೆ. ತುಳುನಾಡಿನ ಜನರು ಶಿವ ಎಂಬ ನಂಬಿಕೆಯಿಂದ ಉಲ್ಲಾಯ, ಉಲ್ಲಾಲ್ತಿಯನ್ನು ಪೂಜಿಸುವುದಿಲ್ಲ. ನಾಗ, ನಾಗಬೆರ್ಮೆರ್ ಎಂಬ ನಂಬಿಕೆಯಿಂದಲೇ ಪೂಜಿಸುತ್ತಾರೆ. ವಾಸ್ತವವಾಗಿ ಪಾಡ್ದನಗಳು ಉಲ್ಲಾಯನನ್ನು ಈಶ್ವರ ಎನ್ನುವುದಿಲ್ಲ. ಸಿರಿ ಬಳಗ, ಬೆರ್ಮರನ್ನು ಉಲ್ಲಾಯನೆಂದೇ ಉದ್ದಕ್ಕೂ ಸಂಬೋಧಿಸುತ್ತದೆ. ಅಲಡೆಗಳ ಆಚರಣೆಗಳಲ್ಲಿ ಉಲ್ಲಾಯ ಪ್ರಧಾನ ದೈವ ಆಗುತ್ತಾನೆ. ಉಲ್ಲಾಯನನ್ನು ಧರ್ಮರಸು, ಧರ್ಮದೇವತೆ ಎಂದು ಜನರು ಗುರುತಿಸುತ್ತಾರೆ. ಉಲ್ಲಾಕುಲು, ನಾಗಬೆರ್ಮೆರ್, ಅರಸು ದೈವ, ನಾಲ್ಕಾಯಿತಾಯೆ, ನೇಲ್ಯನ್ನೇರ್, ಎಲ್ಯನ್ನೇರ್, ಬಲಾಂಡಿದೈವ ಹೀಗೆ ಬೇರೆ ಬೇರೆ ಹೆಸರುಗಳಿಂದ ರೂಪಾಂತರ ಗೊಂಡಿದೆ. ಉಲ್ಲಾಯನ ಕೋಲದ ಮುಡಿಯ 1001 ಅಡಕೆಯ ಹಾಳೆಯಿಂದ ನಾಗನ ಹೆಡೆಗಳು ನಾಗಬೆರ್ಮರ ಬ್ರಹ್ಮಸ್ವರೂಪವನ್ನು ಬಿಂಬಿಸುವುದರೊಂದಿಗೆ ನಾಗಬೆರ್ಮ ವಿವಿಧ ರೂಪಗಳಿಂದ ತುಳುನಾಡಿನ ಜನರ

ಮನದಲ್ಲಿ ಭಕ್ತಿಯನ್ನು ಶ್ರದ್ಧೆಯನ್ನು ನೆಲೆಗೊಳಿಸುವಲ್ಲಿ ಪ್ರಧಾನ ಪಾತ್ರವನ್ನು ವಹಿಸಿದ್ದಾನೆ. ಏನೇ ಆದರೂ ಕೂಡಾ ನಾಗಬೆರ್ಮೆರ ಆರಾಧನೆಯ ರೂಪಾಂತರ ಹೊಂದಿರುವ ವೈದಿಕ ಪ್ರಭಾವದಿಂದಲೆ ಎಂಬುದು ಮನದಟ್ಟುಮಾಡಿಕೊಳ್ಳಬಹುದು. ವೈದಿಕದ ತೆಕ್ಕೆಗೆ ಜಾರಿ ಬ್ರಹ್ಮಲಿಂಗೇಶ್ವರನಾದ, ಮಹಾಲಿಂಗೇಶ್ವರನಾದ, ಅಥವಾ ದುರ್ಗಾಪರಮೇಶ್ವರಿಯಾದ, ಇದರಿಂದ ಅಲಡೆಗಳಲ್ಲಿ ಬ್ರಾಹ್ಮಣ ಅರ್ಚಕರು ನಿತ್ಯಪೂಜೆ ಮಾಡುವಂತಾಯಿತು. ಇಂತಹ ಪರಿವರ್ತನೆ ದ್ರಾವಿಡ ಪದ್ಧತಿ ಮೂಲೆಗುಂಪಾಗಿ ವೈದಿಕ ಪದ್ಧತಿಯಿಂದಾಗಿ ಬೆರ್ಮೆರ ಹಲವು ರೀತಿಯಲ್ಲಿ ರೂಪಾಂತರ ಹೊಂದುವಂತಾಯಿತು.[೧೭]

ಕಡಂದಲೆ ಪರಾಡಿ, ಕಂಬಳ ದೈವ ಉಲ್ಲಾಯ



ಹೊಳೆಮ್ಮಾಗಿ ಗರೊಡಿ - ಕುಂದಾಪುರ ತಾಲೂಕು



ಬೋಳ ಮಲ್ಲಿಗೆ ಗರೊಡಿ - ಕಾರ್ಕಳ ತಾಲೂಕು

ಬ್ರಹ್ಮಲಿಂಗೇಶ್ವರ ದೇವಸ್ಥಾನ, ಮಾರಣಕಟ್ಟೆ



ಉಳ್ಳಾಯ ಧರ್ಮ ದೈವ

## ಸಂದರ್ಭ ಸೂಚಿ


೧, ಪ್ರೋ. ಎ.ವಿ. ನಾವಡ ಗಾಯತ್ರಿ ನಾವಡ, ಕಾಡ್ಯಾನಾಟ. ಪಠ್ಯ ಮತ್ತು ಸಂಗ್ರಹ ಪುಟ – ೧೨೪.

೨. ಡಾ॥ ಇಂದಿರಾ ಹೆಗ್ಗಡೆ ತುಳುವರ ಮೂಲತಾನ, ಆದಿ ಆಲಡೆ ಮತ್ತು ಪರಿವರ್ತನೆ ಪುಟ–೮೬

೩. ಅದೇ ಪುಟ – ೮೬

೪. ಅದೇ ಪುಟ – ೮೬

೫. ಕಡವ ಶಂಭುಶರ್ಮ, ತುಳು ದೇಶ ಭಾಷಾ ವಿಚಾರ ಪುಟ – ೩೧

೬. ಉಪ್ಪುಂದ ಚಂದ್ರಶೇಖರ ಹೊಳ್ಳ, ಕುಂದನಾಡು, ದೇವಾಲಯ ಹಾಗೂ ಶ್ರದ್ಧಾ ಕೇಂದ್ರಗಳು. ಒಂದು ಸಾಂಸ್ಕೃತಿಕ ಪರಿಚಯ ಪುಟ – ೧೪೩.

೭. ಜೋಶಿ ಎನ್. ಕೆ. ಇತಿಹಾಸ ದರ್ಶನ ಪುಟ – ೧೭೪. ೨೦೦೬.

೮. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್, ನಾಗಬೆರ್ಮ, ಪುಟ – ೯೨.

೯. ಅದೇ ಪುಟ – ೯೨

೧೦. ಅದೇ ಪುಟ – ೯೩

೧೧. ಅದೇ ಪುಟ – ೯೪

೧೨. ರಮೇಶ ಕೆ.ವಿ. ಮತ್ತು ಎಂ. ಜೆ. ಶರ್ಮ ತಳುನಾಡಿನ ಶಾಸನಗಳು ಸಂ. ೧

೧೩. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್, ನಾಗಬೆರ್ಮ, ಪುಟ – ೧೦೪.

೧೪. ಅದೇ ಪುಟ – ೧೦೫

೧೫. ಅದೇ ಪುಟ – ೧೦೫

೧೬. ಅದೇ ಪುಟ – ೧೦೬

೧೭. ಡಾ॥ ಇಂದಿರಾ ಹೆಗ್ಗಡೆ ತುಳುವ ಮೂಲತಾನ ಆದಿ ಆಲಡೆ ಪುಟ – ೬೮

೧೮. ಅದೇ ಪುಟ – ೬೯


**********

# ಅಧ್ಯಾಯ - 5

## ನಾಗಬ್ರಹ್ಮರ ಆರಾಧನ ವಿಧಾನಗಳು

ತುಳು ಜನಪದರ ಆಳವಾದ ನಂಬಿಕೆಗಳು ಸಂಪ್ರದಾಯ ಆಚಾರ ವಿಚಾರಗಳು ಬೆರೆತುಕೊಂಡಿವೆ. ತುಳುನಾಡಿನ ಮಣ್ಣಿನ ಗುಣಗಳನ್ನು, ಕಲೆಯನ್ನು ಮೈಗೂಡಿಸಿಕೊಂಡಿರುವ ನಾಗಬ್ರಹ್ಮನ ಆರಾಧನಾ ಪದ್ಧತಿ, ವೈಧಿಕ ಆರಾಧನ ಪದ್ಧತಿಯ ಬೆಳವಣಿಗೆಯೊಂದಿಗೆ ಪ್ರಾಮುಖ್ಯತೆಯನ್ನು ಕಳೆದುಕೊಂಡಿದೆ. ದ್ರಾವಿಡ ಸಂಸ್ಕೃತಿಯ ಈ ಆರಾಧನಾ ಪದ್ಧತಿಯಲ್ಲಿ ಅನಂತರ ವೈದಿಕ ಪದ್ಧತಿಯ ಪ್ರವೇಶವಾಗಿದೆ. ನಾಗಬ್ರಹ್ಮರ ಆರಾಧನೆಯೂ ಪ್ರಕೃತಿ ಆರಾಧನೆಯೂ ಹೌದು, ಪಿತೃ ಆರಾಧನೆಯೂ ಹೌದು. ಜನಪದರು ಈ ಆರಾಧನಾ ಪದ್ಧತಿಯಲ್ಲಿ ಅಳವಡಿಸಿಕೊಂಡಿದ್ದ ನಿಯಮಾವಳಿಗಳು, ಕಟ್ಟುಪಾಡುಗಳು, ಸಂಪ್ರದಾಯ ಆಚರಣೆಗಳು ವಿಶಿಷ್ಟವಾದುದು. ತಮ್ಮ ಎಲ್ಲಾ ಕಾರ್ಯಕ್ರಮಗಳಲ್ಲಿ ದೈವವನ್ನು ಮುಂದಿಟ್ಟುಕೊಂಡು ಬಾಳುತ್ತಿದ್ದ ರೀತಿ ಅವರ ನಿವೇದನೆಗಳು ಅಮೂಲ್ಯವಾದುದು ಹಾಗೂ ವೈಚಾರಿಕವಾದುದು ವಿವಿಧ ಸಮಾಜದವರಿಗೆ ಮೀಸಲಾಗಿದ್ದ ಸೇವೆಗಳು ಹಿರಿಯರ ಸಮ್ಮುಖದಲ್ಲಿ ನೇಮ, ಉತ್ಸವ ಆಚರಣೆಯಲ್ಲಿ ವ್ಯವಸ್ಥಿತವಾಗಿ ನೆರವೇರುತ್ತಿತ್ತು.

ತುಳುನಾಡಿನ ಮುಖ್ಯ ಆರಾಧನೆಯ ವಿಧಾನಗಳಲ್ಲಿ ನಾಗಸೇವೆ, ಬೆರ್ಮೆರ್ ಸೇವೆ ಇವೆರಡು ಸಾತ್ವಿಕ ವಿಧಾನದಲ್ಲಿ ನಡೆದುಕೊಂಡು ಬಂದಿದೆ. ಭೂತಾರಾಧನೆ ಮಾತ್ರ ಸಸ್ಯಹಾರ ಮತ್ತು ಮಾಂಸಹಾರಗಳೆಂದು ಎರಡು ವಿಧಾನಗಳಲ್ಲಿಯೂ ನಡೆಯುತ್ತದೆ. ಆದಿ ಆಲಡೆ ಬ್ರಹ್ಮಸ್ಥಾನಗಳಲ್ಲಿ ಬೆರ್ಮೆರಿಗೆ ನಡೆಸುವ ಸೇವೆಗಳ ವಿಧಾನಗಳು ಬೇರೆ ಬೇರೆಯಾದರೂ ಎಲ್ಲವೂ ವೈದಿಕ ಪದ್ಧತಿಯ ಸೇವೆಗಳಾಗಿವೆ. ಗರಡಿಗಳಲ್ಲಿ ಪೂಜಾರಿಗಳು ಈ ಸೇವೆಯನ್ನು ನಡೆಸಿಕೊಡುತ್ತಾರೆ.[೧] ಕೆಲವು ಕಡೆ ಬ್ರಾಹ್ಮಣರು ಪೌರೋಹಿತ್ಯ ವಹಿಸುತ್ತಾರೆ. ಗರಡಿಗಳಲ್ಲಿ ಸೇವೆಯನ್ನು ನಡೆಸುವ ಸೇವೆಯು ಕೂಡ ಒಂದೊಂದು ಕಡೆಗಳಲ್ಲಿ ಒಂದೊಂದು ರೀತಿ ಇದೆ. ಆದರೂ ಸಾಮಾನ್ಯವಾಗಿ ಗರಡಿಗಳಲ್ಲಿ ಹೇಗೆ ಸೇವೆ ನಡೆಯುತ್ತದೆ ಎಂಬ ವಿಷಯದ ಬಗ್ಗೆ ತುಳುನಾಡ ಗರಡಿಗಳ ಸಾಂಸ್ಕೃತಿಕ ಅಧ್ಯಯನ ಗ್ರಂಥದಲ್ಲಿ ವಿವರಣೆ ನೀಡಿದ್ದಾರೆ. ಬೆರ್ಮರಿಗೆ ನೀಡುವ ಸೇವೆಗಳೆಂದರೆ ನಿತ್ಯ ಪೂಜೆ ಮಂಗಳವಾರದ ಪೂಜೆ ಪರ್ವ ದಿನಗಳ ಪೂಜೆ, ಸಂಕ್ರಾಂತಿ ಪೂಜೆ, ಹೂವಿನ ಪೂಜೆ, ಚೌತಿ ಪೂಜೆ, ತೆನೆಕಟ್ಟುವ ಪೂಜೆ, ಎಡೆ ಸೇವೆ, ರಂಗಪೂಜೆ ಮತ್ತು ನೇಮೋತ್ಸವ ನಡೆಯುತ್ತದೆ.[೨]

ನಿತ್ಯಪೂಜೆ ನಡೆಸುವ ಗರಡಿಗಳು ಬಹಳ ಕಡಿಮೆ. ಪ್ರಸಿದ್ಧಿ ಪಡೆದ ಗರಡಿಗಳಾದ ಕಂಕನಾಡಿ, ಕೊಳ್ಳಬೈಲು, ಮುದ್ರಾಡಿ ಹೀಗೆ ಕೆಲವು ಕಡೆಗಳಲ್ಲಿ ಮಾತ್ರ ನಿತ್ಯ ಪೂಜೆ ನಡೆಯುತ್ತದೆ. ಆದರೆ ಹೆಚ್ಚಿನ ಕಡೆಗಳಲ್ಲಿ ಮಂಗಳವಾರದ ಪೂಜೆ ಮಾತ್ರ ನಡೆಯುತ್ತದೆ. ಪೂಜೆ ಮಾಡುವ ಪೂಜಾರಿ ಸ್ನಾನ ಮಾಡಿ ಮಡಿ ಉಟ್ಟುಕೊಂಡು ಬೆರ್ಮನ ಗರ್ಭಗುಡಿ ಪ್ರವೇಶಿಸಬೇಕು. ಬೆರ್ಮನ ಬಿಂಬವನ್ನು ನೀರಿನಿಂದ

ತೊಳೆದು ಶುದ್ಧಗೊಳಿಸಬೇಕು. ಕಲಶ ಇಲ್ಲವೇ ಕೊಂಬಿನ ಗಿಂಡೆಯನ್ನು ತೊಳೆದು ಅದರಲ್ಲಿ ಹೊಸ ಶುದ್ಧ ನೀರನ್ನು ತಂದಿಡಬೇಕು. ದೀಪ ಬೆಳಗಿಸಿ ಬೆರ್ಮನ ಬಿಂಬವನ್ನು ಹೂವು ಪಿಂಗಾರಗಳಿಂದ ಅಲಂಕರಿಸಿ ಧೂಪಾರತಿ ಎತ್ತಿ ಶುದ್ಧಗೊಳಿಸಬೇಕು. ಗಂಧ, ಕುಂಕುಮ, ಹೂವು ಸಮರ್ಪಣೆ ಮಾಡಬೇಕು. ಪಂಚಕಜ್ಜಾಯ (ಕಜ್ಜಯಿ) ತಯಾರಿಸಿ ಅದನ್ನು ಕೂಡಾ ಸಮರ್ಪಣೆ ಮಾಡಬೇಕು. ನಂತರ ಹಣ್ಣುಕಾಯಿ ಮಾಡಿ ಮಂಗಳಾರತಿ ಎತ್ತುವುದು. ಪೂಜೆ ಮುಗಿದ ಬಳಿಕ ಪ್ರಸಾದ ಹಂಚುವುದು. ಇದು ಈಗ ನಡೆಸಲ್ಪಡುವ ಪದ್ಧತಿ.[೩]

ಗರಡಿಗಳಲ್ಲಿ ಸಂಕ್ರಾಂತಿ ಮತ್ತು ಚೌತಿಯಂದು ವಿಶೇಷ ಪೂಜೆಗಳು ನಡೆಯುತ್ತವೆ. ಶ್ರಾವಣ ತಿಂಗಳಲ್ಲಿ ಹೂವಿನ ಪೂಜೆ ನಡೆಯುತ್ತದೆ. ಅದಲ್ಲದೇ ತೆನೆ ತುಂಬಿಸುವ ಹಬ್ಬ ನಡೆಯುತ್ತದೆ. ತುಳುನಾಡಿನಲ್ಲಿ ಎಣಿಲ್ ಭತ್ತದ ಬೆಳೆ ಕೊಯ್ಲಿಗೆ ಸಿದ್ಧವಾದಾಗ ಸಾಮಾನ್ಯವಾಗಿ ಚೌತಿ ಕಳೆದ ಬಳಿಕ ಈ ಹಬ್ಬವನ್ನು ಕೃಷಿಕರ ಮನೆ ಮನೆಗಳಲ್ಲಿ ಆಚರಿಸುತ್ತಾರೆ. ಭತ್ತದ ತೆನೆ ಮತ್ತು ಪವಿತ್ರ ಮರಗಿಡಗಳ ಎಲೆಗಳನ್ನು ತಂದು ಅದಕ್ಕೆ ಪೂಜೆ ಸಲ್ಲಿಸಿ ಮನೆಯ ಮುಖ್ಯ ಭಾಗಗಳಿಗೆ ಅದನ್ನು ಕಟ್ಟುವುದು ಈ ಹಬ್ಬದ ಆಚರಣೆ ಪ್ರಕೃತಿ ಪೂಜೆಯೇ ಇದರ ಆಶಯ. ಈ ಹಬ್ಬವನ್ನು ಕೂಡಾ ಗರಡಿಗಳಲ್ಲಿ ನಡೆಸಲಾಗುತ್ತದೆ. ಗರಡಿಗಳಲ್ಲಿ ತೆನೆ ಪೂಜೆ ನಡೆದ ನಂತರ ತೆನೆಗಳನ್ನು ಎಲ್ಲಾ ಭಕ್ತರಿಗೆ ಹಂಚಲಾಗಿರುತ್ತದೆ. ಅವರು ಅದನ್ನು ತಮ್ಮ ತಮ್ಮ ಮನೆಗೆ ಕೊಂಡೊಯ್ದು ಕಟ್ಟುತ್ತಾರೆ. ಅದು ಅದೃಷ್ಟದ ಸಂಕೇತವೆಂದು ಭಾವಿಸಿಕೊಳ್ಳುತ್ತಾರೆ.[೪]

**ಎಡೆಸೇವೆ (ಅಗೆಲ್)**

ಗರಡಿಗಳಲ್ಲಿ ನಡೆಯುವ ಎಡೆಸೇವೆ ಅತ್ಯಂತ ಮುಖ್ಯ ಸೇವೆಯಾಗಿದೆ. ಇದೆ ತುಳುನಾಡಿನ ಭೂತರಾಧನೆಗಿಂತ ತುಸು ಭಿನ್ನವಾಗಿದೆ. ಭೂತರಾಧನೆಯ ಎಡೆಸೇವೆ ಮಾಂಸ ಭಕ್ಷ್ಯಗಳಿಂದ ಕೂಡಿದರೆ, ಬೆರ್ಮೆರೆ ಎಡೆಸೇವೆ ಸಂಪೂರ್ಣ ಸಸ್ಯಹಾರದಿಂದ ಕೂಡಿರುತ್ತದೆ.

ಗರಡಿಗಳಲ್ಲಿ ಎಡೆ ಬಡಿಸುವ ಮುಂಜಾನೆ ದಿನದಂದು ಪೂಜೆ ಮಾಡುವ ಪೂಜಾರಿ ಮಿಂದು ಶುದ್ಧವಾಗಿ ಮಡಿ ಬಟ್ಟೆ ಉಟ್ಟು ಊರವರನ್ನು ಸೇರಿಕೊಂಡು ಗರಡಿಗೆ ಬರುತ್ತಾನೆ. ಊರವರು ಬರುವಾಗ ಹೊಸ ಕುಕ್ಕೆಗಳಲ್ಲಿ ಅಕ್ಕಿ ತೆಂಗಿನಕಾಯಿ 5 ಬಗೆಯ ತರಕಾರಿ ಮತ್ತಿತರ ಅಡುಗೆಯ ಸಾಮಾಗ್ರಿಗಳನ್ನು ಹೊತ್ತುಕೊಂಡು ಬರುತ್ತಾರೆ. ಗರಡಿಗೆ ಒಂದು ಸುತ್ತು ಬಂದು ಒಳಹೊಕ್ಕು ಅದನ್ನು ಗರ್ಭಗುಡಿಯ ಮುಂದಿನ ಮಂಚದಲ್ಲಿ ಇಡುತ್ತಾರೆ. ಪೂಜಾರಿ ಕಲಶ ಸ್ಥಾಪನೆ ನಡೆಸಲು ತಂದ ಅಕ್ಕಿ ಸಾಮಾಗ್ರಿಗಳ ಮೇಲೆ ತೀರ್ಥವನ್ನು ಸಿಂಪಡಿಸಿ ಬೆರ್ಮರಿಗೆ ಪೂಜೆಯನ್ನು ಸಲ್ಲಿಸುತ್ತಾನೆ. ಪೂಜೆ ನಡೆದ ಬಳಿಕ ಸೇವೆ ನಡೆಸುವ ಬಗ್ಗೆ ಸಂಕಲ್ಪ ಮಾಡಿಕೊಳ್ಳುತ್ತಾರೆ. ಆ ಬಳಿಕ ಎಡೆ ಬಡಿಸಲು ಅಡುಗೆ ಸಿದ್ಧತೆ ನಡೆಯುತ್ತದೆ. 5 ಪಾತ್ರೆಗಳಲ್ಲಿ 5 ಬಗೆಯ ತರಕಾರಿ ಸಾಂಬಾರು ಒಂದು ಪಾತ್ರೆಯಲ್ಲಿ ಅನ್ನ ತಯಾರಿಸುತ್ತಾರೆ. ಎಡೆ

ಬಡಿಸಲು ನಿರ್ದಿಷ್ಟ ತರಕಾರಿಗಳನ್ನು ಬಳಸಬೇಕು. ಸಿಹಿ ಕುಂಬಳ, ಬಾಳೆಕಾಯಿ, ಬಾಳೆದಿಂಡು, ಹಲಸಿನಕಾಯಿ, ಮರಸಣಿಗೆ, ನುಗ್ಗೆಸೊಪ್ಪು, ಇವುಗಳ ಯಾವುದಾದರೂ 5 ಬಗೆಯ ತರಕಾರಿಗಳ ಪದಾರ್ಥವಾಗಬೇಕು. ಅನ್ನಮಾಡಲು ಸುಗ್ಗಿಯ ಭತ್ತದ ಕುಟ್ಟಿದ ಅಕ್ಕಿಯಾಗಬೇಕು. ಎಣಿಲ ಬೆಳೆಯ ಕುಚ್ಚಲಕ್ಕಿಯಾಗಬಹುದು. ಮಧ್ಯಾಹ್ನದ ಫಲಹಾರದ ಬಳಿಕ ಪೂಜಾರಿ ಮತ್ತೊಮ್ಮೆ ಮಿಂದು ಶುದ್ಧಗೊಂಡು ಬರುತ್ತಾನೆ. ಶುದ್ಧವಾಗಿ ಬಂದು ಅದಾಗಲೇ ತಂದ ತರಕಾರಿಗಳನ್ನು ಬೇಯಲು ಇಡುತ್ತಾನೆ. ಅನ್ನಕ್ಕೆ ಎಸಲಿಡುತ್ತಾನೆ. ಹತ್ತು ಸೇರು ಅಕ್ಕಿಯ ಅನ್ನ ಎರಡು ಪಾತ್ರೆಗಳನ್ನು ಬೇಯಬೇಕು. ಒಂದು ಪಾತ್ರೆಯಲ್ಲಿ ಸ್ವಲ್ಪ ಹೆಚ್ಚು ಇನ್ನೊಂದು ಪಾತ್ರೆಯಲ್ಲಿ ಸ್ವಲ್ಪ ಕಡಿಮೆ ಹೀಗೆ ಅಡುಗೆ ಮಾಡುವ ಸಂಪೂರ್ಣ ಜವಾಬ್ದಾರಿ ಪೂಜಾರಿಯದ್ದಾಗಿರುತ್ತದೆ.[೫]

ಎಡೆ ಬಡಿಸುವ ಮೊದಲು ಗರ್ಭಗುಡಿಯ ಮುಂದ ಹೋಮ ಮಾಡುವ ಕ್ರಮವಿದೆ. ಗರಡಿಗಳ ಎದುರು ಮರದ ದಳಿಗಳಿರುತ್ತವೆ. ಈ ದಳಿಗಳ ಮೇಲೆ ಹಣತೆ ಹಚ್ಚಿಡುತ್ತಾರೆ. ಗರ್ಭಗುಡಿಯ ಮುಂದೆ ಕೂಡಾ ಹಣತೆ ಹಚ್ಚಿಡುತ್ತಾರೆ. ಇದರ ಮಧ್ಯದಲ್ಲಿ ಹೋಮ ಕುಂಡವಿರುತ್ತದೆ. ಹೋಮಕುಂಡದ ಎದುರು ತೆಂಗಿನಗರಿಯ ಚಂದ್ರಿಕೆ ಮಾಡಿ ಆ ಚಂದ್ರಿಕೆಯ ಮೇಲೆ ಸಿಪ್ಪೆ ತೆಗೆದು ಅಂದಗೊಳಿಸಿದ ತೆಂಗಿನಕಾಯಿಯೇ ಇಡುತ್ತಾರೆ. ತೆಂಗಿನಕಾಯಿಯ ತಲೆಗೆ ಹೂವು-ಪಿಂಗಾರ ಕೆಳಗೆ ಅಡಿಕೆ ವೀಳ್ಯ ಮತ್ತು ಗಂಧವನ್ನು ಇಡುತ್ತಾರೆ. ಇದನ್ನು ಸುತ್ಯೆ ಎನ್ನುತ್ತಾರೆ. ಈ ಸುತ್ಯೆಯ ಪಕ್ಕದಲ್ಲಿ ವಜ್ರಾಕಾರದಲ್ಲಿ ಕತ್ತರಿಸಿದ ಬಾಳೆ ಎಲೆಯ ಸೀಳುಗಳನ್ನು ಇಟ್ಟು ಅದರ ಮೇಲೆ, ಅವಲಕ್ಕಿ ಬೆಲ್ಲ ತೆಂಗಿನಕಾಯಿ ಹಾಕಿ ಬೆರೆಸಿದ ಪಂಚಕಜ್ಜಾಯ ಹಾಕುತ್ತಾರೆ. ಇದಕ್ಕೆ ಒಂದೊಂದು ಎಸಳು ಪಿಂಗಾರ ಇಡುತ್ತಾರೆ. ಅದರ ನಂತರ ಹೋಮ ಪ್ರಾರಂಭವಾಗುತ್ತದೆ. ಹೋಮಕುಂಡಕ್ಕೆ ಅನ್ನ ಹಾಕುತ್ತಾರೆ. ಗಂಧ ಹಲಸಿನ ಕಟ್ಟಿಗೆ ಇಟ್ಟು ತುಪ್ಪ ಹೊಯ್ದು ಹೋಮ ಪ್ರಾರಂಭಿಸುತ್ತಾರೆ. ಹೋಮಕ್ಕೆ ತುಪ್ಪ ಹಾಕಲು ಮಡಲಿನ ಕಟ್ಟಿಗೆಯಿಂದ ಮಾಡಿದ ಪಂಚಕ ಎಂಬ ಕೂರ್ಜೆ ಇರುತ್ತದೆ. ಕಲಗದ ನೀರು ಹೂ-ಪಿಂಗಾರ ಎಲ್ಲವನ್ನು ಹೋಮದ ಸುತ್ತ ತಂದು ಬಿರ್ಮನ ಬಿಂಬಕ್ಕೆ ಸಮರ್ಪಿಸುತ್ತಾರೆ. ಬಡಿಸಿದ ಪಂಚಕಜ್ಜಾಯದ ಮೇಲೆ ಹೂವು ನೀರು ಸಿಂಪಡಿಸುತ್ತಾರೆ. ಹಾಗೆಯೇ ಮಂಚದ ಮೇಲಿಟ್ಟ ದೈವಗಳ ಬಿಂಗಳಿಗೆ ಹೂ-ನೀರು ಸಮರ್ಪಿಸಿ ಕಲಶದ ನೀರು ಪ್ರೋಕ್ಷಿಸುತ್ತಾರೆ. ನಂತರ ಪೂಜಾರಿಯು ಗರ್ಭಗುಡಿಯ ಒಳಗೆ ಇರುವ ಎಲ್ಲಾ ಪೂಜಾ ಸಾಮಾಗ್ರಿಗಳನ್ನು ಹೊರಕ್ಕೆ ತಂದು ಹೋಮ ಕುಂಡಕ್ಕೆ ಸುತ್ತು ತೆಗೆದು ಒಂದೊಂದನ್ನು ಒಳಗೆ ಕೊಂಡೊಯ್ದು ಇಡುತ್ತಾನೆ. ಆ ಬಳಿಕ ಹೋಮಕ್ಕೆ ಮಂಗಳಾರತಿ ಮಾಡುತ್ತಾನೆ. ಹೋಮಕುಂಡದ ಬೆಂಕಿಯಿಂದ ಆರತಿ ಹಚ್ಚಿ ಬೆರ್ಮರಿಗೆ ಆರತಿ ಮಾಡುತ್ತಾನೆ. ಬಳಿಕ ಪೂಜಾರಿ ಪ್ರಾರ್ಥನೆ ಸಲ್ಲಿಸುತ್ತಾನೆ. ಊರವರೆಲ್ಲ ಬೆರ್ಮರಿಗೆ ಕೈ ಮುಗಿದು ಅಡ್ಡ ಬೀಳುತ್ತಾನೆ. ನಂತರ ಪೂಜಾರಿ ಪ್ರಾರ್ಥನೆ ಸಲ್ಲಿಸುತ್ತಾನೆ.[೬]

ಗರಡಿಗಳಲ್ಲಿ ಪ್ರಥಮವಾಗಿ ನಾಗಬೆರ್ಮೆರಿಗೆ ಪೂಜೆಯನ್ನು ಸಲ್ಲಿಸಿದ ನಂತರವೆ ಇತ ದೈವಗಳಿಗೆ ಬಲಿ ನೇಮಗಳು ನಡೆಯುತ್ತವೆ. ಅದೆ ಯಾವುದೇ ಗರಡಿಯಲ್ಲಿ ಆಲಡೆಯಲ್ಲಿ ಬರ್ಮೆರಿಗೆ ಪೂಜೆ ಪುರಸ್ಕಾರಗಳನ್ನು ಸಲ್ಲಿಸಿದ ನಂತರವೇ ಇತರ ಕಾರ್ಯಕ್ರಮ ನಡೆಯುವುದು.[೭]

ಗರೊಡಿಗಳು ಮುಂದಿನ ಬೆಳವಣಿಗೆಯಾಗಿ ಭಕ್ತರಿಂದ ರಚನೆಯಾದ ಆರಾಧನಾ ಕೇಂದ್ರಗಳು. ಕೋಟಿ ಚೆನ್ನಯರ ಮಾನವಾತೀತ ಶಕ್ತಿಯಿಂದಾಗಿ ಅವರ ಕುಲಬೆರ್ಮೆರ್ ಕ್ಷೇತ್ರದಲ್ಲಿ ದೈವಿಕ ಶಕ್ತಿಗಳಾಗಿ ನೆಲೆಯಾದರು. ಅವರು ಜಾತಿಯಲ್ಲಿ ಬೈದ್ಯರು ದ್ವಿಶಕ್ತಿಗಳಾಗಿ ಬೈದೆರ್ಲು ತುಳುನಾಡಿನ ಪುರಾತನ ಗರೊಡಿ ಮನೆಗಳು ಮೇಲ್ವರ್ಗದ ಜೈನ–ಬಂಟರಲ್ಲಿ ಇವೇ ಈ ಚಾವಡಿಗಳಲ್ಲಿ ಬೈದರ್ಲೆ ಉಜ್ಜಾಲ್ ಇರುತ್ತವೆ.[೮]

ಕೆಲವು ಬೈದೆರ್ಲೆ ಗರೋಡಿಗಳಲ್ಲೂ ಬೆರ್ಮೆರ್ ನಿರಾಕಾರ ರೂಪದಲ್ಲಿ ಇದ್ದಾನೆ ಅಥವಾ ಕೆಲವೆಡೆ ಸಾಂಕೇತಿಕ ರೂಪ ಇದೆ. ಇಂತಹ ಎಲ್ಲಾ ಗರೋಡಿಗಳು ಹೆಚ್ಚು ಪುರಾತನವಲ್ಲ.

ಪ್ರಕೃತಿಯ ಅದ್ಭುತ ಶಕ್ತಿಗಳನ್ನು ದೇವರೆಂದೇ ಪೂಜಿಸಿದ ತುಳುನಾಡಿನ ಮೂಲ ಸಂಸ್ಕೃತಿಯಲ್ಲಿ "ಬೆರ್ಮೆರ್" ಎಂಬ ದೇವರ ನಂಬುಗೆ ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದೆ.

ಬ್ರಹ್ಮ ಬೈದೆರ್‌ಗಳ ಗರೋಡಿಗಳಲ್ಲಿ ನಡೆಯುವ ಹೂವಿನ ಪೂಜೆ, ಚೌತಿ ಪೂಜೆ, ಸಂಕ್ರಮಣ ಪೂಜೆ, ವಾರದ ಪೂಜೆ, ಗೆಜ್ಜೆಯಿ ಪೂಜೆ, ಅಗೆಲ್, ಪೂಜೆ, ವಾರ್ಷಿಕ ಪೂಜೆ, ಹರಕೆಯ ನೇಮ ಇವೆಲ್ಲವೂ ಸಾತ್ವಿಕ ಪೂಜೆಗಳು. ದೇವಸ್ಥಾನಗಳಲ್ಲಿ ನಡೆಯುವಂತೆಯೇ ಗರೋಡಿಗಳಲ್ಲಿ ಸಾತ್ವಿಕ ಪೂಜೆಗೆ ಪ್ರಾಮುಖ್ಯತೆ ಇದೆ. ಹೆಚ್ಚಿನ ಭೂತಾಲಯಗಳಲ್ಲಿ ನಡೆಯುವ ಪ್ರಾಣಿ ಬಲಿಯಂತಹ ತಾಮಸ ಪೂಜೆ ಗರೋಡಿಗಳಲ್ಲಿ ನಿಷಿದ್ಧ.[೯]

ಆಲಡೆಗಳ ಆರಾಧನಾ ವಿಧಾನ: ಬೆರ್ಮೆರಿಗೆ ನಿತ್ಯ ಪೂಜೆ ಕಾರ್ಯಕ್ರಮ ನಡೆಯುತ್ತಿದೆ. ಬೆರ್ಮಲಿಂಗೇಶ್ವರ ಎಂದು ಹೆಸರು ಬದಲಾಯಿಸಿಕೊಂಡ ಆಲಡೆಗಳಲ್ಲಿ ಬ್ರಾಹ್ಮಣರು ನಿತ್ಯಪೂಜೆ ಮಾಡುತ್ತಾರೆ. ಒಂದು ಸೇರು ಅಥವಾ ನೈವೇದ್ಯ ಸಮರ್ಪಣೆ ಮಾಡುತ್ತಾರೆ. ಬೆರ್ಮೆರಿಗೆ ಸಂತಾನ ಪಡೆಯುವ ಸಲುವಾಗಿ ಹರಕೆ ಹೇಳುತ್ತಾರೆ. ಹೀಗೆ ಹರಕೆ ಹೇಳಿ ಮಕ್ಕಳು ಹುಟ್ಟಿದಾಗ ಆ ಮಗುವಿನ ಹೆಸರಿನಲ್ಲಿ "ಕಂಚಿಲು ಸೇವೆ" ನಡೆಸುತ್ತಾರೆ. ಹೆಣ್ಣು ಮಗುವಾದರೆ ಆಕೆ ಮೈನೆರೆಯುವ ಮೊದಲು ಹರಕೆ ತೀರಿಸಬೇಕೆಂಬ ನಿಯಮವಿದೆ.[೧೦]

ಕಂಚಿಲು ಸೇವೆ ನಡೆಯುವ ದಿನ ಆಲಡೆ ಅಂಗಣದಲ್ಲಿ ಒಂದೆಡೆ ನೆಲದ ಮೇಲೆ ಬಟ್ಟೆ ಹಾಸಿ ಮಗವನ್ನು ಕುಳ್ಳಿರಿಸಿರುತ್ತಾರೆ. ಮಗು ಗಂಡಾದರೆ ವರನಂತೆ ಹೆಣ್ಣಾದರೆ ವಧುವಿನಂತೆ ಸಿಂಗರಿಸಿರುತ್ತಾರೆ. ತಂದೆ ತಾಯಿ ಮಕ್ಕಳ ಕೈಯಲ್ಲಿ ಪಿಂಗರ ಕೊಟ್ಟು ಮಕ್ಕಳನ್ನೆತ್ತಿಕೊಂಡು ಇಲ್ಲವೆ ನಡೆಸಿಕೊಂಡು ಆಲಡೆಗೆ ಪ್ರದಕ್ಷಿಣೆ ಬಂದು ಪಿಂಗಾರದ ಹಾಳೆಯನ್ನು ಅರ್ಚಕರಿಗೆ ಒಪ್ಪಿಸುತ್ತಾರೆ. ಇದನ್ನು "ಕಂಚಿಲ್ ತುಂಬುನು"

ಎನ್ನುತ್ತಾರೆ. ಮಕ್ಕಳು ತಮ್ಮ ಮುಷ್ಠಿಯಲ್ಲಿ ಹಿಡಿದಷ್ಟು ನಾಣ್ಯಗಳನ್ನು ಹರಕೆಯಾಗಿ ದೇವರಿಗೆ ಸಲ್ಲಿಸುವ ಕ್ರಮವಿದೆ. ಇದನ್ನು ಮುಂಡಿಪಣವು ಎನ್ನುತ್ತಾರೆ.[೧೧]

ಬೆರ್ಮೆರನ್ನು ಒಂದು ದೈವವೆಂದು ಪರಿಗಣಿಸಿ ಕೋಲ ಕೊಡುವ ಕ್ರಮವಿದೆ. ಈ ಭೂತಕ್ಕೆ ನಲಿಕೆ ಜನಾಂಗದವರು ಕಟ್ಟುತ್ತಾರೆ. ಬಂಟ್ವಾಳ, ಪುತ್ತೂರು ತಾಲೂಕಿನಲ್ಲಿ ಈ ಪದ್ಧತಿ ಇದೆ. ಪುತ್ತೂರು ತಾಲೂಕಿನ ಕೆದಂಬಾಡಿಯ ಮುಂಡಾಲ ಗುತ್ತಿನಲ್ಲಿ ಬೆರ್ಮೆರ ಕೋಲ ವರ್ಷಂಪ್ರತಿ ನಡೆಯುತ್ತದೆ. ಭಂಡಾರದ ಮನೆಯಲ್ಲಿ ಉಯ್ಯಾಲೆ ಇರುತ್ತದೆ. ಉಯ್ಯಾಲೆ ಮೇಲೆ ಬೆರ್ಮೆರ ಆಯುಧಗಳನ್ನಿಟ್ಟಿರುತ್ತಾರೆ. ನಂತೂರು ಕಾಸರಗೋಡಿನ ಕೂಳೂರು ಖಂಡಿಗೆ ಮುಂತಾದ ಕಡೆ ಬೆರ್ಮೆರಿಗೆ ನೇಮ ನಡೆಯುತ್ತದೆ. ಖಂಡಿಗೆಯಲ್ಲಿ ಬೆರ್ಮೆರಿಗೆ ಪ್ರತ್ಯೇಕ ತಾನವಿದೆ. ಕಾನದೊಳಗೆ ಉಯ್ಯಾಲೆ ಇದೆ. ಬೀಡಿನ ಒಳಗಡೆಗೂ ಉಯ್ಯಾಲೆ ಇದೆ. ಈ ಬೆರ್ಮೆನನ್ನು ಧರ್ಮೆರಸು ಎನ್ನುತ್ತಾರೆ. ಧರ್ಮೆರಸು ಉಲ್ಲಾಯ ಖಡ್ಗಧಾರಿಯಾಗಿ ಕುದುರೆ ಮೇಲೆ ಕುಳಿತಿದ್ದಾನೆ. ಈ ಆಲಡೆಗಳಲ್ಲಿ ಬಂಟರು ಅಥವಾ ಜೈನರು ಮುಖ್ಯಸ್ಥರಾಗಿರುತ್ತಾರೆ. ಕೆಲವೆಡೆ ಬ್ರಾಹ್ಮಣರು ಮುಖ್ಯಸ್ಥರಾಗಿರುವುದು ಇದೆ. ಇತರ ಜಾತಿಯವರು ಕೂಡ ಕೋಲ ಮತ್ತಿತರ ಆಚರಣೆಗಳಲ್ಲಿ ಪಾಲು ಪಡೆಯುತ್ತಾರೆ.[೧೨]

ಸ್ವಾಮಿಕೋಲ ಗರಡಿಗಳನ್ನು ಬಿಟ್ಟರೆ ಉಳಿದಂತೆ ಆಲಡೆಗಳಲ್ಲಿ ಗುಂಡ ತಾನಗಳಲ್ಲಿ ಬೆರ್ಮೆರ ಆರಾಧನೆ ನಡೆಯುತ್ತಿದೆ. ಕುಂದಾಪುರದ ಕಡೆ ಪಾಣಾರ ಜಾತಿಯವರು ಪಾಣಾರಾಟ ಎಂಬ ಕೊಲ ನಡೆಸುತ್ತಾರೆ. ಈ ಕೋಲವನ್ನು ನಡೆಸಿ ಕೊಡುವವರು ಹೆಚ್ಚಾಗಿ ನಾಡವರು, ಬಿಲ್ಲವರು ಮತ್ತು ಮೊಗವೀರರು. ಪಾಣಾರಾಟದಲ್ಲಿ ಮುಖ್ಯವಾಗಿ ಮೂರು ಭಾಗಗಳಿರುತ್ತದೆ. ಸ್ವಾಮಿ ಕೋಲ, ಭೂತ ಕೋಲ ಮತ್ತು ನಾಗಕೋಲ – ಇವುಗಳಲ್ಲಿ ನಡೆಸುವ ಸ್ವಾಮಿ ಕೋಲವು ಬೆರ್ಮೆರ ಆರಾಧನೆ ಆದರೆ ಸ್ವಾಮಿ ಎಂದರೆ ಬೆರ್ಮೆರು ಎಂಬ ವಿಚಾರ ದೈವಕ್ಕೆ ಕಟ್ಟುವ ಪಾಗಾರರಿಗಾಗಲಿ, ನಡೆಸುವವರಿಗಾಗಲಿ ತಿಳಿಯದಿರುವುದು ವಿಶೇಷ. ನಾಗಬೆರ್ಮೆ ಪುಸ್ತಕದಲ್ಲಿ ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ಉಲ್ಲೇಖ ಮಾಡಿದ್ದಾರೆ.[13]

ಇತರ ಆಚರಣೆಗಳಲ್ಲಿ ನಾಗಬೆರ್ಮೆ ತುಳುನಾಡಿನ ಜನಪದ ಕುಣಿತರಗಳು ಆಟಿಕಳೆಂಜ ಎಂಬ ಕುಣಿತವು ಅತ್ಯಂತ ಪ್ರಾಚೀನವಾದುದು. ದಕ್ಷಿಣ ಕನ್ನಡ ಜಿಲ್ಲೆ ಹಾಗೂ ಕಾಸರಗೋಡು ತಾಲೂಕಿನಲ್ಲಿ ಈ ಕುಣಿತವನ್ನು ಆಷಾಡ ಮಾಸದಲ್ಲಿ ನಡೆಸುತ್ತಿದ್ದರು ಕಳೆಂಜ ಎಂದರೆ ಕಳೆಯುವವ ಎಂದರ್ಥ. ಈ ಕುಣಿತದ ಹಾಡಿನಲ್ಲಿ ಕಳೆಂಜನ ತಂದೆ 'ಬೆರ್ಮೆರ್' ಎಂದು ಹೇಳಲ್ಪಟ್ಟಿದ್ದ. ಇದು ಕಳೆಂಜನಿಗೆ ಅನ್ವಯವಾಗುತ್ತದೆ. ಬಿರ್ ಎಂಬ ಪದಕ್ಕೆ ಸೃಷ್ಟಿಕರ್ತ ಎಂಬ ಅರ್ಥವು ಇದೆ. ಕಳೆಂಜನ ಸೃಷ್ಟಿ ಬೆರ್ಮೆನಿಂದಲೇ ಆಯಿತು ಎಂಬುದು ಇದಕ್ಕೆ ಪುರಾವೆ ನೀಡುತ್ತದೆ.[೧೪]

ಬೆಳ್ತಂಗಡಿ ತಾಲೂಕಿನಲ್ಲಿ ಜೋಡಿ ಕಳೆಂಜರು ಕುಣಿತಕ್ಕೆ ಬರುತ್ತಾರೆ. ಇವರನ್ನು ಕಳೆಂಜರು ಎನ್ನುವುದಕ್ಕಿಂತ ಹೆಚ್ಚಾಗಿ "ಬೆರ್ಮೆರ್ ಮಾಣಿಲು" ಎಂದು ಹೆಸರಿಸುವುದು ರೂಢಿ. ಕುಣಿತದ ಮುಕ್ತಾಯದ ದಿನ ಎಡೆ ಇಡುವ ಕ್ರಮವಿದೆ. ಹೀಗೆ ಎಡೆ ಇಡುವಾಗ ಒಂದು ಎಡೆ ಬೆರ್ಮರಿಗೆ ಬಡಿಸುತ್ತಾರೆ. ದೈವಗಳಿಗೆ ಬಡಿಸುವ ಎಡೆ ಮಾಂಸಾಹಾರವಾದರೆ ಬೆರ್ಮನಿಗೆ ಬಡಿಸುವ ಎಡೆ ಸಸ್ಯಹಾರದ್ದಾಗಿರುತ್ತದೆ. ದೈವಗಳಿಗೆ ಶೇಂದಿ, ಶರಾಬು ಪಾನೀಯ ಸಮರ್ಪಿಸಿದರೆ. ಬೆರ್ಮನಿಗೆ ಹಾಲು ಸಮರ್ಪಣೆ ಮಾಡಲಾಗುತ್ತದೆ.[೧೫]

ತುಳುನಾಡಿನಲ್ಲಿ ಪ್ರಾಚೀನ ಕಾಲದಿಂದ ಈವರೆಗೆ ಸಾರ್ವತ್ರಿಕವಾಗಿ ನಡೆದುಕೊಂಡು ಬಂದ ಆರಾಧನೆ ಆಚರಣೆಗಳನ್ನು ಗಮನಿಸಿದರೆ ತುಳುನಾಡಿನ ಸಂಸ್ಕೃತಿ ಅತ್ಯಂತ ಪ್ರಾಚೀನವಾದುದು ಎಂಬುದು ಸ್ಪಷ್ಟವಾಗುತ್ತದೆ. ಜಗತ್ತಿನ ನಾಗರಿಕತೆಗಳಲ್ಲಿ ನದೀ ದಂಡೆಗಳಲ್ಲಿ ಹುಟ್ಟಿಕೊಂಡವು ಎಂಬುದಕ್ಕೆ ಇತಿಹಾಸ ಆಧಾರ ನೀಡುತ್ತಿದೆ. ಜನರ ಬದುಕಿಗೆ ನೀತಿ ಆಧಾರವಾಗಿದ್ದುರಿಂದ ನೀರಿನ ಪ್ರಯೋಜನವನ್ನು ಪಡೆದು ಅದನ್ನೆ ದೈವವೆಂದು ಪರಿಗಣಿಸಿ ಆರಾಧನೆಗೆ ತೊಡಗಿದರು. ನೀರನ್ನು ಮಣ್ಣಿನ ಕಲಶದಲ್ಲಿಟ್ಟು ಅದನ್ನು ಆರಾಧಿಸುವ ಆರಾಧನ ಪದ್ಧತಿ ಎನ್ನಬಹುದು. ತುಳುನಾಡಿನ ಮೂಲನಿವಾಸಿಗಳೆಂದು ಕರೆಯಲ್ಪಟ್ಟ ಜನಾಂಗದವರು. ಈಗಲೂ ಅದನ್ನು ಉಳಿಸಿಕೊಂಡು ಬಂದಿದ್ದಾನೆ.[೧೬]

ಭೂತ ಬ್ರಹ್ಮನ ಕಲ್ಪನೆಗೆ ಹೊಂದುವಂತಹ ಒಂದು ವಿಗ್ರಹ ಉಡುಪಿಯ ವೀರಭದ್ರ ದೇವಾಲಯದಲ್ಲಿ ಇದೆ. ಇಂದಿಗೂ ದೇವರ ಉತ್ಸವ ಮೂರ್ತಿಯನ್ನು ತಲೆಯ ಮೇಲೆ ಹೊತ್ತುಕೊಂಡು ಬಲಿ ಬರುವವರನ್ನು ಬ್ರಹ್ಮವಾಹನ ಎಂದು ಕರೆಯುತ್ತಾರೆ. ದೇವರ ಮೂರ್ತಿಯನ್ನು ತಲೆಯಲ್ಲಿ ಇಟ್ಟುಕೊಂಡು ಬಲಿ ಬರುವ ಸಂಪ್ರದಾಯ ತುಳುನಾಡಿನ ಸುಬ್ರಹ್ಮಣ್ಯ ದೇವಾಲಯ ಹಾಗೂ ಶಿವನ ದೇವಾಲಯಗಳಲ್ಲಿವೆ. [೧೭]

ಅನೇಕ ನಾಗಬನಗಳಲ್ಲಿ ಹಾಗೂ ಗರೋಡಿಗಳಲ್ಲಿ ಮೇಲ್ಭಾಗದಲ್ಲಿ ಮುಸುಕು ಮುಖವನ್ನು ಕೆಳಭಾಗ ಸರ್ಪಾಕಾರವನ್ನು ಹೊಂದಿರುವ ನಾಗಬ್ರಹ್ಮನ ಮೂರ್ತಿಗಳಿವೆ. ಈ ಮೂರ್ತಿಗಳಲ್ಲಿ ನಾಗ ಹಾಗೂ ಬೆರ್ಮೆರ್‌ನ ಸಮನ್ವಯವಿದ್ದ ಸಾಂತೂರು ಆಲಡ ಬೆರ್ಮೆರ್ ಇಲ್ಲಿ ವರ್ಷಕ್ಕೆ ಒಮ್ಮೆ ಡಕ್ಕೆ ಬಲಿ ನಡೆಯುತ್ತದೆ. ಪಗ್ಗು ತಿಂಗಳಲ್ಲಿ 13 ಸಲ್ಲುವಂದು ನಿತ್ಯ ಪೂಜೆ ಇಲ್ಲ. ಪ್ರತಿ ತಿಂಗಳ ಸಂಕ್ರಮಣದಿಂದ ನಡೆಯುತ್ತಿದೆ. ಹರಕೆಯ ಸೇವೆಗಳು ಇರುತ್ತದೆ. ಆಲಡ ಬರ್ಮೆರ್ ತಾಣದ ಕಾಡಿನ ಮಧ್ಯ 12 ವರುಷಕ್ಕೊಮ್ಮೆ ವಿಶೇಷ ಆಚರಣೆ ನಡೆಯುತ್ತದೆ.[೧೮]

ಆಶ್ಲೇಷ ಬಲಿ, ಢಕ್ಕೆ ಬಲಿ, ಬ್ರಹ್ಮ ಮಂಡಲ ಇವು ಒಂದೇ ಆಚರಣೆಗೆ ಇರುವ ಭಿನ್ನ ಹೆಸರುಗಳು. ಇದು ನಾಗ ಬೆರ್ಮರ ಉಪಾಸನಾ ಸೇವೆ. ಆದರೆ ನಾಗಮಂಡಲದಲ್ಲಿ ಪ್ರತ್ಯೇಕತೆ ಇದೆ. ಮಂಡಲದ ರಚನೆಯಲ್ಲಿ ಇದನ್ನು ಕಾಣಬಹುದು. ದರ್ಶನ ಪಾತ್ರಿಗಳು ಮತ್ತು ನರ್ತನ ಎರಡಕ್ಕೆ ಒಂದೇ

ಡಕ್ಕೆ ಬಲಿಯಲ್ಲಿ ಹೆಡೆ ಬಿಚ್ಚಿದ ಹಾವಿನ ಬದಿಯಲ್ಲಿ ಮೀಸೆ ಇರುವ ಬೆರ್ಮರ ರುಂಡ ಚಿತ್ರಿಸುತ್ತಾರೆ. ಶ್ರೀ ಚಕ್ರವನ್ನು ಬಿಡಿಸುತ್ತಾರೆ ಶಂಬಾರವದ ಶ್ರೀ ಚಕ್ರ ಪೂಜೆಯು ವೇದಾಂತ ಪುರಾತನ ಸಂಪ್ರದಾಯ ಎನ್ನುತ್ತಾರೆ. ಸ್ವಾಮಿ, ನಾಗ ಬೆರ್ಮೆರ್ ಮತ್ತು ಪರಿವಾರ ದೈವಗಳಾದ ಚಿಕ್ಕು, ರಕ್ತೇಶ್ವರಿ, ಮುಂತಾದ ದೈವಗಳಿಗೂ ಡಕ್ಕೆ ಬಲಿ ನಡೆಯುವ ಸಂಪ್ರದಾಯ ಇದೆ.[೧೯]

ನಾಗಬೆರ್ಮೆರ ಕೋಲ: ಬೆರ್ಮೆರ್ ಕೋಲ ಬೆಳ್ತಂಗಡಿ ಬಂಟ್ವಾಳ, ಕಾಸರಗೋಡು ತಾಲೂಕುಗಳಲ್ಲಿ ನಡೆಯುತ್ತವೆ. ಜೊತೆಗೆ ಪರಿವಾರ ದೈವಗಳ ಕೋಲ ಇವೆ.. ಎಲ್ಲಾ ದೈವಗಳಿಗೂ ಒಬ್ಬನೇ ಪಾತ್ರಿ, ಆದರೆ ಮುಡಿಯ ಅಲಂಕಾರ ಮತ್ತು ಕೈಯ ಆಯುಧ ಬದಲಾಗುತ್ತದೆ. ಒಂದು ಗಂಟೆಯ ಒಳಗೆ ಬೆರ್ಮೆರ್ ಕೋಲ ಮುಗಿಯುತ್ತದೆ.[೨೦]

ಪಾತ್ರಿಯು ಸೀರೆ ಉಟ್ಟು ಮೇಲ್ಗಡೆ ಅಂಗಿ ಧರಿಸಿ ಚಿನ್ನದ ಕೈದಂಡೆ, ಒಡವೆ ಧರಿಸುತ್ತಾನೆ. ಪರಂಪರೆಯ ಪದ್ಧತಿಯಂತೆ ಪಾಲೆಯ ಸಿರಿ ಮುಡಿ ಇರುತ್ತದೆ. ಇತ್ತೀಚೆಗೆ ಎಲ್ಲೆಡೆ ಬೆಳ್ಳಿಯ ಮುಡಿ ಆಗಿದೆ. ಕೆಳಗೆ ಸೀರೆ ನೆರಿ ಮೇಲೆ ಮೀಸೆ ಕಟ್ಟುತ್ತಾರೆ. ಕೆಳಗೆ ಹೆಣ್ಣು ರೂಪ ಒಮ್ಮೆ ಬಿಲ್ಲು ಬಾನ ಒಮ್ಮೆ ಖಡ್ಗ ಹಿಡಿದು ನರ್ತಿಸುತ್ತಾನೆ. ಬೆರ್ಮೆರ್ ಕೋಲದಲ್ಲಿ "ಬೆರ್ಮೆರಜ್ಜೆ ಕೋಲ" ಅಗತ್ಯ ಆಗಲೇ ಬೇಕು ಬೆರ್ಮೆರ್ ತಲೆ ಪಟ್ಟಿ ಮುಡಿ ಕಳಚಿ ಅಜ್ಜಿ ಕೂದಲು ತೊಡುತ್ತಾನೆ. ಬೆಳ್ತಂಗಡಿಯಲ್ಲಿ ಬೆರ್ಮರಜ್ಜಿ ಕೋಲ ಆದ ಮೇಲೆ ಗಿಳಿರಾಮ ಮತ್ತು ಇತರ ದೈವಗಳಿಗೆ ಕೋಲ ನಡೆಯುತ್ತದೆ. ಅತಿಕಾರೆ ಭತ್ತದ ಬೀಜದ ಕುರುಂಟಿಗೆ ಬಾಣ ಬಿಟ್ಟ ಬಾಣದ ಹಿಡಿಯ ಎತ್ತಿ ನಿಂತಲ್ಗೆ ಮೂರು ಸುತ್ತು ಪ್ರದಕ್ಷಿಣೆ ಹಾಕುತ್ತಾನೆ.[೨೧]

ತುಳುನಾಡಿನ ನಾಗಬ್ರಹ್ಮ ನಾನಾ ರೂಪದಲ್ಲಿ ನಾನಾ ವಿಧವಾಗಿ ಆರಾಧನೆ ಪಡೆಯುತ್ತಿದ್ದಾನೆ. ಬೆರ್ಮೆರ್ ಆರಾಧನೆ ತುಳುನಾಡಿನ ವಿಶಿಷ್ಟ ಆರಾಧನ ಪದ್ಧತಿಯಾಗಿದೆ. ತುಳುನಾಡಿನ ಆತನು ಆರಾಧನೆ ಬೆರ್ಮೆರ್ ಆರಾಧನೆ ಮೂಲ ಅಥವಾ ಬೆರ್ಮರ್ ಆರಾಧನೆಯಿಂದ ತುಳುನಾಡಿನಲ್ಲಿ ಅರಸು ಆರಾಧನೆ ಆರಂಭವಾಯಿತು.



ಕಲ್ಮಾಡಿ ಗರೊಡಿಯಲ್ಲಿ ನಡೆಯುವ ಅಗೆಲ್ ಸೇವೆ (ಎರಡು ಕಡೆ ಮರದ ದಳಿ ಇಟ್ಟು ನಡೆಯುವ ಈ ಪೂಜಾ ಪದ್ಧತಿ ಶೈವ ದೇವಸ್ಥಾನದ ರಂಗಪೂಜೆಯನ್ನು ಹೋಲುತ್ತದೆ. )



# ಸಂದರ್ಭ ಸೂಚಿ


೧. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ನಾಗಬೆರ್ಮೆ – ಪುಟ ೯೯.

೨. ಅದೇ ಪುಟ – ೯೯

೩. ದ್ರಾವಿಡ ಅಧ್ಯಯನ ಸಂಪುಟ ೪, ಸಂಚಿಕೆ – ೧, ಜನವರಿ–ಜೂನ್ ೨೦೦೫ ಪುಟ ೧೩೨

೪. ಬನ್ನಂಜೆ ಬಾಬ ಅಮೀನ್ ಮೋಹನ್ ಕೋಟ್ಯಾನ್ ತುಳುನಾಡ ಗರೋಡಿಗಳ ಸಾಂಸ್ಕೃತಿಕ ಅಧ್ಯಯನ ಪುಟ – ೧೧೨.

೫. ಅದೇ ಪುಟ – ೧೧೩

೬. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್, ನಾಗಬೆರ್ಮೆ, ಪುಟ – ೧೦೦.

೭. ಅದೇ ಪುಟ – ೧೦೧

೮. ಅದೇ ಪುಟ – ೧೦೨

೯. ಬನ್ನಂಜೆ ಬಾಬ ಅಮೀನ್, ಮೋಹನ್ ಕೋಟ್ಯಾನ್, ತುಳುನಾಡ ಗರೋಡಿಗಳ ಸಾಂಸ್ಕೃತಿಕ ಅಧ್ಯನ ಪುಟ – ೧೧೮

೧೦. ಅದೇ ಪುಟ – ೧೧೯

೧೧. ಅದೇ ಪುಟ – ೧೧೧

೧೨. ಡಾ॥ ಇಂದಿರಾ ಹೆಗ್ಗಡೆ ತುಳುವರ ಮೂಲತಾನ ಆದಿ ಆಲಡೆ ಮತ್ತು ಪರಿವರ್ತನೆ ಪುಟ– ೩೧೧

೧೩. ಅದೇ ಪುಟ ೩೧೨

೧೪. ಡಾ. ಪಾಲ್ತಾಡಿ ರಾಮಕೃಷ್ಣ ಅಚಾರ್, ನಾಗಬೆರ್ಮೆ, ಪುಟ – ೯೩.

೧೫. ಅದೇ ಪುಟ – ೯೪

೧೬. ಅದೇ ಪುಟ – ೧೦೪

೧೭ ಅದೇ ಪುಟ – ೧೦೭

೧೮. ಲೀಲಾ ಭಟ್, ಬೆಳಕಿನೆಡೆಗೆ – ಸಂಶೋಧನಾ ಲೇಖನ

೧೯. ಪುಟ ಸಂಖ್ಯೆ – ೪೨.

೨೦. ಅದೇ ಪುಟ – ೪೨

೨೧. ಅದೇ ಪುಟ – ೪೩

೨೨. ಡಾ॥ ಇಂದಿರಾ ಹೆಗ್ಗಡೆ ಕೋಲ ಬಳಿಯ ಮುಂಡಾಲರು, ಇತಿಹಾಸ ದರ್ಶನ ಪುಟ – ೧೯

೨೩. ಅದೇ ಪುಟ – ೧೯

೨೪. ಡಾ॥ ಇಂದಿರಾ ಹೆಗ್ಗಡೆ ಕೋಲ ಬಳಿಯ ಮುಂಡಾಲರು, ಇತಿಹಾಸ ದರ್ಶನ ಪುಟ – ೩೩೩

**********

# ಅಧ್ಯಾಯ – 6

## ನಾಗಬ್ರಹ್ಮ ಪರಿಕಲ್ಪನೆ ಸಾಮಾಜಿಕ ಜನಪದ ಸಂಬಂಧಗಳು

ತುಳುನಾಡಿನ ಧಾರ್ಮಿಕ ಆಚರಣೆಗಳಲ್ಲೇ ನಾಗಬ್ರಹ್ಮರ ಆರಾಧನೆಯು ತುಂಬಾ ವಿಶಿಷ್ಟ ಆರಾಧನೆಯಾಗಿದೆ. ತುಳುನಾಡಿನ ಮಹಾಕಾವ್ಯಗಳಂತಿರುವ ಪಾಡ್ದನಗಳಲ್ಲಿ, ನಾಗಬ್ರಹ್ಮರ ಆರಾಧನೆಯ ಬಗ್ಗೆ ಅನೇಕ ವಿಚಾರಗಳನ್ನು ತಿಳಿಸುವ ಒಂದು ಮಹತ್ವವಾದ ಸಂಗತಿಗಳಿರುವುದು ಕಂಡು ಬರುತ್ತದೆ.

ಕಾಲಾನುಕಾಲಕ್ಕೆ ನಂಬಿಕೆಗಳಲ್ಲಿ ಬದಲಾವಣೆಯಾದಂತೆ ಆರಾಧನೆಯ ಸ್ವರೂಪದಲ್ಲಿ ಬದಲಾವಣೆಗಳಾಗಿವೆ. ಕಾಲ ಬದಲಾದಂತೆ ನಾಗಬ್ರಹ್ಮರ ಆರಾಧನೆಯೊಂದಿಗೆ ಅತಿ ಮಾನುಷ ಶಕ್ತಿಗಳು ನೆಲೆನಿಂತವು. ಉದಾ: ಬ್ರಹ್ಮ ಬೈದೆರ್, ಸಿರಿ, ಕಾಂತಾಬಾರೆ–ಬುಧಬಾರೆ, ರಾಜನ್ ದೈವಗಳು ಇನ್ನಿತರ ದೈವಗಳು ಅರಾಧನೆಗೆ ಒಳಪಟ್ಟಿತು. ಬೆರ್ಮರ ಬಗ್ಗೆ ಬೇರೆ ಬೇರೆ ದೈವದ ಪಾಡ್ದನಗಳಲ್ಲಿ ಉಲ್ಲೇಖಿತವಾಗಿದೆ.[೧]

ತುಳುನಾಡಿಗೆ 'ಬಿರ್' ಯಾವಾಗ ಬಂದನೆಂದು ನಿರ್ದಿಷ್ಟವಾಗಿ ಹೇಳಲು ಬರುವುದಿಲ್ಲ. ಯಾಕೆಂದರೆ ಬಹಳ ಪ್ರಾಚೀನ ಕಾಲದಲ್ಲೇ ಇಲ್ಲಿಗೆ ವೈದಿಕೆ ಧಮ ಕಾಲಿಟ್ಟಿದೆ. ವೈದಿಕ ಸಂಸ್ಕೃತಿಯಲ್ಲೂ ಯಕ್ಷನ ಆರಾಧನೆ ಇದೆ. ವೈದಿಕ ಪುರಾಣಗಳ ಪ್ರಕಾರ ಯಕ್ಷರು ನೀರನ್ನು ಕಾಯುವವರು. ನೀರಿನ ಆಶ್ರಯದ ಬದಿಗಳಲ್ಲಿರುವ ಮರಗಳಲ್ಲಿ ವಾಸಿಸುವವರು ಸೂರದ್ರೂಪಿಗಳು, ಮಾಯಾವಿಗಳು, ಮನುಷ್ಯರ ಮೈಯಲ್ಲಿ ಅವಾಹನೆ ಗೊಳ್ಳುವವರು, ಮನುಷ್ಯರನ್ನು ಸಮ್ಮೋಹಿನಿಗೆ ಒಳಪಡಿಸುವವರು. ಪ್ರಾಚೀನ ಸಂಸ್ಕೃತ ಕವಿಗಳು ತಮ್ಮ ಕಾವ್ಯ ಪ್ರಾರಂಭದಲ್ಲಿ ಯಕ್ಷನನ್ನು ಸ್ಮ್ರುತಿಸಿದ್ದಾರೆ. ಶ್ರೇಷ್ಠ ಕವಿ ನಾಟಕಕಾರ ಕಾಳಿದಾಸನೇ ತನ್ನ ಕಾವ್ಯದಲ್ಲಿ ಯಕ್ಷಸ್ಮತಿ ಮಾಡಿದ್ದಾರೆ.[೨] ಅಷ್ಟದಿಕ್‌ಪಾಲಕರಲ್ಲಿ ಒಬ್ಬನಾದ ಧನಾಧಿಪತಿ ಕುಬೇರನು ಯಕ್ಷರಾಜ ಯಕ್ಷರು ಶಿವನ ಪರಿವಾರಕ್ಕೆ ಸೇರಿದವರು. ಶಿವಾಲಯಗಳು ನಿರ್ಮಾಣ ಪ್ರಾರಂಭವಾದ ಮೇಲೆ ಈ ದೇವಾಲಯಗಳ ಬಾಗಿಲ ಇಬ್ಬದಿಗಳಲ್ಲಿ ಯಕ್ಷರನ್ನು ದ್ವಾರಪಾಲಕರಾಗಿ ನಿಲ್ಲಿಸುವ ಪದ್ಧತಿ ರೂಢಿಗೆ ಬಂತು. ಜ್ಯೋತಿಷ್ಯ ಶಾಸ್ತ್ರದಲ್ಲೂ ಕೂಡಾ ಯಕ್ಷರ ಉಲ್ಲೇಖಗಳು ಭೂತಬಾಧೆಯಂತೆ ಯಕ್ಷಿ–ಯಕ್ಷಿಣಿಯರೂ ಸಾಮಾನ್ಯ ಜನರನ್ನು ಪೀಡಿಸುತ್ತಾರೆ ಎಂಬುದಾಗಿ ಜ್ಯೋತಿಷಿಗಳು ಜನರಲ್ಲಿ ನಂಬಿಕೆ ತುಂಬಿಸಿ ಅದಕ್ಕೆ ಪರಿಹಾರೋಪಾಯಗಳನ್ನು ಸೂಚಿಸುತ್ತಿದ್ದರು.[೩]

ತುಳು ಜಾನಪದ ಕಲೆಗಳಲ್ಲಿ ಐತಿಹ್ಯಗಳಲ್ಲಿ ಯಕ್ಷ–ಯಕ್ಷಿಣಿಯರ ಕತೆಗಳಿವೆ. ತುಳುವಿನಲ್ಲಿ ಯಕ್ಷ–ಯಕ್ಷಿಣಿಯರನ್ನು ಜಕ್ಕ–ಜಕ್ಕಣಿಯರೆಂದು ಕರೆಯುತ್ತಿದ್ದರು. ಪ್ರಾಕೃತ ಭಾಷೆಯಲ್ಲಿ ಇದೇ ಪದ ಬಳಸಲಾಗುವುದು. ಮೌರ್ಯ ವಂಶದ ಚಕ್ರವರ್ತಿ ಅಶೋಕನ ಕಾಲದಲ್ಲಿ ಬೌದ್ಧ ಧರ್ಮ ಭಾರತದಾದ್ಯಂತ ಮಾತ್ರವಲ್ಲ ಶ್ರೀಲಂಕಾ, ಟಿಬೇಟ್, ಚೀನಾ, ದೇಶಗಳಲ್ಲೂ ಪ್ರಭಾವಗೊಂಡಿತು. ಆಗಿನ ಕಾಲದ ಲಂಕೆಯ

ಅನುರಾಧಪುರ ಬೌದ್ಧ ಧರ್ಮ ಪ್ರಚಾರಕರಿಗೆ ಕೇಂದ್ರ ಸ್ಥಳವಾಗಿತ್ತು. ಬುದ್ಧನ ಆರಾಧನೆಯ ಜೊತೆಗೆ ಅಲ್ಲಿನ ಜನ ಯಕ್ಷರನ್ನು ಕೂಡಾ ಆರಾಧಿಸ ತೊಡಗಿದರು. ಅಲ್ಲಿನ ಜನ ಯಕ್ಷಾರಾಧನೆಗೆ, ಯಕ್ಷಬಲಿ, ಯಕ್ಷಕೋಲ ಮುಂತಾದ ವಿವಿಧ ವಿಧಾನಗಳನ್ನು ರೂಪಿಸಿಕೊಂಡರು. ಅಲ್ಲಿ ಪಾಣಾರ್ ಜನಾಂಗದ ಕಲಾವಿದರು ಈ ಆರಾಧನೆಗಳಲ್ಲಿ ವಿಶೇಷವಾಗಿ ಭಾಗವಹಿಸುತ್ತಿದ್ದರು. ಪಾಣಾರ್ ಜನಾಂಗದವರು ಲಂಕೆಯಿಂದ ಕೇರಳವಾಗಿ ಫಾಲ್ಘಾಟ್ ದಾಟಿ ತುಳುನಾಡಿಗೆ ವಲಸೆ ಬಂದರು. ತುಳುನಾಡಿನಲ್ಲಿ ಭೂತಗಳಿಗೆ ಮೂರ್ತರೂಪ ಕೊಟ್ಟು ಭೂತಮಾಧ್ಯಮ ವ್ಯಕ್ತಿಗಳಾಗಿ ಭೂತ ಕೋಲ ನಡೆಯುವಂತೆ ಮಾಡಿದರು. ಯಕ್ಷಾರಾಧನೆಯ ಒಂದು ಪ್ರಕಾರವಾಗಿದ್ದ ಜಕ್ಕೆ ಬಲಿಯನ್ನು ಪುನರ್ ರೂಪಿಸಿದರು. ಯಕ್ಷಬಲಿ ಉತ್ತರ ಭಾರತದಲ್ಲಿ ನೆಡಯುತ್ತದೆ. ಒಂದು ಆರಾಧನಾ ವಿಧಾನ ತುಳುನಾಡಿನಲ್ಲೂ ಯಕ್ಷಬಲಿ ನಡೆಯುವುದು. ಇದನ್ನು ತುಳುವರು ಜಕ್ಕೆ ಬಲಿ ಎನ್ನುತ್ತಿದ್ದರು.(೪) ಈಗಲೂ ಕೂಡಾ ಸಾಮಾನ್ಯ ಜನರು ಜಕ್ಕೆ ಬಲಿ ಎಂದೇ ಕರೆಯುತ್ತಾರೆ. ಇದನ್ನು ಪಾಣಾರರು ನಡೆಸುತ್ತಿದ್ದರು. ವೈದಿಕ ಧರ್ಮದ ಅನುಯಾಯಿಗಳಾಗಿ ಬ್ರಾಹ್ಮಣ ವರ್ಗದವರ ಕೈಸೇರಿ ನಾಗಮಂಡಲವಾಗಿ ನಾಗಾರಾಧನೆಗೆ ರೂಪಾಂತಗೊಂಡಿತು. ಈಗಲೂ ನಾಗಮಂಡಲದ ಮಧ್ಯೆ ಯಕ್ಷನ ಚಿತ್ರ ಬರೆಯಲಾಗುತ್ತಿದೆ. ಯಕ್ಷರಾಧನೆಯು ರಂಗಕಲೆಯಾಗಿ ಪರಿವರ್ತನೆಗೊಂಡು ಯಕ್ಷಗಾನವಾಯಿತು. ತುಳುನಾಡಿನ ಈ ಬೌದ್ಧ ಧರ್ಮವು ಸುಮಾರು 10ನೇಯ ಶತಮಾನದಲ್ಲಿ ಹೆಚ್ಚು ಪ್ರಚಾರಗೊಂಡಿತೆಂದು ಡಾ. ಗುರುರಾಜ ಭಟ್ ಅವರು ಹೇಳಿದ್ದಾರೆ. ಬೌದ್ಧ ಧರ್ಮವು ಕೂಡಾ ಇಲ್ಲಿನ ಯಕ್ಷರಾಧನೆಗೆ ಹೆಚ್ಚು ಪ್ರಚೋದನೆ ನೀಡಿತು. ಯಕ್ಷರಾಧನೆಗೆ ಹೆಚ್ಚು ಪ್ರೋತ್ಸಾವನ್ನು ಕೊಟ್ಟ ಧರ್ಮವೆಂದರೆ ಜೈನ ಧರ್ಮ ಕ್ರಿ.ಶ.6–7ನೇ ಶತಮಾನದಲ್ಲಿ ಜೈನರು ತುಳುನಾಡಿನ ಆಡಳಿತೆಯ ಚುಕ್ಕಾಣಿ ಹಿಡಿದರು. ಈ ಸಂದರ್ಭದಲ್ಲಿ ಜೈನ ಮತ್ತು ಹಿಂದೂ ಧರ್ಮದ ನಡುವೆ ಕೆಲವೊಂದು ಕೂಡು ಕೊಳ್ಳಗೆಗಳು ನಡೆದವು. ಜೈನರ ಯಕ್ಷರಾಧನೆಯನ್ನು ಇಲ್ಲಿನ ಸಾಮಾನ್ಯ ಜನರು ಸ್ವೀಕರಿಸಿದರು. ಹಿಂದುಗಳ ಶಿವ ಶಕ್ತಿ ಮತ್ತು ದೈವಗಳ ಆರಾಧನೆಯಲ್ಲಿ ತುಳುಭಾಷೆ ಸಂಸ್ಕೃತಿ ಕುಟುಂಬ ಪದ್ಧತಿಗಳನ್ನು ಜೈನ ಮತಾವಲಂಬಿಗಳು ಸ್ವೀಕರಿಸಿದರು. ಹೀಗೆ ತುಳುನಾಡಿನ ಯಕ್ಷಾರಾಧನೆಗೆ ವೈದಿಕ ಬೌದ್ಧ ಜೈನಧರ್ಮಗಳೆಲ್ಲ ಪ್ರೇರಣೆ ನೀಡಿವೆ. ಯಾವ ಧರ್ಮದ ಪ್ರಭಾವದಿಂದ ಇದು ಹುಟ್ಟಿಕೊಂಡಿತೆಂದು ಹೇಳುವಾಗ ಕಷ್ಟ ಸಾಧ್ಯ.(೫)

ತುಳು ಜಾನಪದದಲ್ಲಿ ಪಾಡ್ದಾನಗಳಲ್ಲಿ ನಾಗಬೆರ್ಮರ ಉಲ್ಲೇಖ ಅಲ್ಲಲ್ಲಿ ಬರುತ್ತಿದೆ. ತುಳುವರ ಮೌಖಿಕ ಮಹಾಕಾವ್ಯಗಳು ಅಕ್ಕರಸು, ಸಿರಿ ಮತ್ತು ಕೋಟಿ–ಚೆನ್ನಯ ಪಾಡ್ದಾನಗಳಲ್ಲಿ ಬೆರ್ಮನ ಕುರಿತು ವಿಶೇಷ ಮಾಹಿತಿಗಳು ದೊರೆಯುತ್ತಿದೆ. ಭೂತಾರಾಧನೆಗೆ ಪ್ರಸಿದ್ಧಿ ಪಡೆದ ತುಳುನಾಡಿನಲ್ಲಿ ಜನರು ಸಾಮಾನ್ಯವಾಗಿ ಬೆರ್ಮರು ಒಂದು ಭೂತವೆಂದೇ ಪರಿಗಣಿಸಿದ್ದಾರೆ. ಆದರೆ ಬೆರ್ಮ ಭೂತವಲ್ಲ ಅನೇಕ ಗುಡಿಗಳಲ್ಲಿ ನಾಗಬೆರ್ಮನು ಭೂತಗಳಿಗೆ ಒಡೆಯನಾಗಿ ಕಂಡುಬರುತ್ತಾನೆ.(೬)

ಸಿರಿಪಾಡ್ದನದಲ್ಲಿ ಬೆರ್ಮೆ ಮೌರ್ಯ ಚಕ್ರವರ್ತಿ ಅಶೋಕನು (ಕಿ.ಪೂ.273–232) ಭಾರತವನ್ನಾಳುತ್ತಿದ್ದಾಗ ದಕ್ಷಿಣದಲ್ಲಿ ಕರ್ನಾಟಕದವರೆಗೆ ಆತನ ರಾಜ್ಯ ವಿಸ್ತರಿಸಲ್ಪಟ್ಟಿತ್ತು. ಚಿತ್ರದುರ್ಗ ಜಿಲ್ಲೆಯ ಸಿದ್ಧಾಪುರ, ಬ್ರಹ್ಮಗಿರಿ ಜಟ್ಟಿಂಗ, ರಾಮೇಶ್ವರ ಮಸ್ಕಿ, ಕೊಪ್ಪಳ ಪಲ್ಕಿಗುಂಡ, ನಿಟ್ಟೂರು, ಸನ್ನತಿ ಮುಂತಾದ ಕಡೆ ಆತನು ನಡೆಸಿದ ಶಾಸನಗಳು (ಕ್ರಿ.ಪೂ. 257) ಕಂಡು ಬರುತ್ತದೆ. ಈ ಶಾಸನಗಳನ್ನು ಆತನು ತನ್ನ ರಾಜ್ಯದ ಗಡಿ ಗುರುತಿಗಾಗಿ ನೆಡಸಿರಬಹುದು. ಆ ಶಾಸನದಲ್ಲಿ ಬರಹ ಈ ರೀತಿ ಇದೆ.

"ಯೇಚ ಅಂತಯಡ ಚೋಡ ಪಂಡಿಯ
ಸತಿಯ ಪುತೋ ಕೇರಡ ಪುತ್ತೋ ತಂಬ ಪರಣಿ
ಇವು ಆಗಿನ ಕಾಲದ ಸುತ್ತಲಿನ ರಾಜ್ಯಗಳ ಹೆಸರುಗಳು"

ಅಂತಯದ (ಆಂಧ್ರಪ್ರದೇಶ) ಚೋಡ (ಚೋಳ) ಪಂಡಿಯ (ಪಾಂಡ್ಯ) ಸತಿಯ ಪುತ್ತೋ (ತುಳು ರಾಜ್ಯ) ಕೇರದ ಪುತ್ತು (ಕೇರಳ) ಮತ್ತು ತಂಬಪರಣಿ (ತಾಂಬ್ರ ಪರಣಿ – ಲಂಕೆ) ಇವಿಷ್ಟು ಅಶೋಕನ ಸಾಮ್ರಾಜ್ಯದ ಸುತ್ತಲಿನ ರಾಜ್ಯಗಳು ತುಳು ರಾಜ್ಯ ಸಹ್ಯಾದ್ರಿ ಪರ್ವತದ ತಪ್ಪಲಿನ ರಾಜ್ಯವಾಗಿರುವುದರಿಂದ ಈ ರಾಜ್ಯಕ್ಕೆ ಸತಿಯ ಪುತ್ತೊ ಎಂಬ ಹೆಸರು ಬಂತು. ಸಂಸ್ಕೃತದ ಸಹ್ಯಪುತ್ರದ ಪಾಲಿ ರೂಪವೇ ಸತಿಯ ಪುತ್ತೋ ಪುತ್ತೋ ಅಂದರೆ ಪಾಲಿ ಭಾಷೆಯಲ್ಲಿ ಜನಾಂಗಕ್ಕೆ ಸೇರಿದ ಎಂದರ್ಥ. ಪಶ್ಚಿಮ ಘಟ್ಟದ ತಪ್ಪಲಿನಿಂದ ಕಡಲ ತಡಿಯವರೆಗೆ ಇರುವ ರಾಜ್ಯದ ಅವಾಸಿಗಳು ಎಂದಿರುವ ಅರ್ಥ ಡಾ। ಶಿವರಾಮ ಕಾರಂತರು ಇದೇ ಅರ್ಥವನ್ನು ಮೂಲಾಧಾರವಾಗಿ ಇಟ್ಟುಕೊಂಡು ತುಳುನಾಡನ್ನು ಸಹ್ಯಾದ್ರಿ ಸಂಪದ ಎಂದಿದ್ದಾರೆ.[೭]

ತುಳುನಾಡಿನ ಎರಡು ಮೌಖಿಕ ಮಹಾಕಾವ್ಯಗಳಲ್ಲೊಂದಾದ ಸಿರಿಪಾಡ್ದದಲ್ಲಿ ಸತ್ಯನಾಪುರ ಎಂಬ ಹೆಸರು ಬರುತ್ತದೆ.

"ಸತ್ಯನಾಪುರಂದ ಎರಮನೆಡ್‌ಗೆನ
ಅರಿಯ ಬನ್ನಾರ್ ಬಿರುಮಾಳ್ವೆರ್
ಒರಿ ಅಜ್ಜೆರ್ ಉಳೆರ್ ಗೆನ್
ಸತ ಸಾವಿರ ಕಾಲೊಡು ನಡತ್‌ದ್ ಪಟ್ಟ ಅಳ್ಳರ್"

ಅಕ್ಕೆರಸು ಸಿರಿಯ ಬದುಕಿನ ಕತೆಯು ಸಿರಿಪಾಡ್ದನ ಸತ್ಯನಾಪುರದ ಅರಮನೆಯಲ್ಲಿ ಬಿರು ಮಾಳ್ಯರೆಂಬ ಕುಲೀನ ಮನೆತನದ ಒಡೆಯರಿದ್ದೂ ಅವರಿಗೆ ಮಡದಿ ಮಕ್ಕಳಿರಲಿಲ್ಲ. ಆಳ್ವರು ತುಂಬಾ ವೃದ್ಧರಾಗಿದ್ದರು ಎಂಬ ವಿವರಣೆ ಪಾಡ್ದನದ ಮೊದಲಿಗೆ ಬರುತ್ತದೆ.[೮]

ಇಲ್ಲಿ ಬಳಸಲಾಗಿರುವ ಸತ್ಯನಾಪುರ ಮತ್ತು ಬಿರುಮಾಳ್ವ ಎಂಬ ಎರಡು ಪದಗಳು ಅತ್ಯಂತ ಪ್ರಾಚೀನವಾದವುಗಳು. ಕ್ರಿ.ಪೂ. 2ನೇ ಶತಮಾನದಲ್ಲಿ ತುಳುನಾಡಿಗೆ ಸತಿಯ ಪುತ್ತೊ ಎಂಬ

ಸಂತೆಂಬುದು ಶಾಸನಧಾರಿತ. ಅದುವೇ ಮುಂದೆ ಸತ್ಯನಾಪುರ ಎಂಬುದಾಗಿ ಮಾರ್ಪಾಟುಗೊಂಡಿದೆ ಎಂಬುದು ನಿಸ್ಸಂಶಯ. ಇಲ್ಲಿ ಸತ್ಯನಾಪುರ ಎಂಬ ಹೆಸರು ಒಂದೇ ಊರಿಗೆ ಮಾತ್ರ ಸೀಮಿತವಾಗಿಲ್ಲ. ಅದು ಇಡೀ ರಾಜ್ಯಕ್ಕೆ ಸಂಬಂಧಪಟ್ಟದ್ದು ಎಂಬುದು ಗಮನಿಸಬೇಕಾದ ವಿಷಯ ಬಿರ್ಮಾಳ ಎಂಬಲ್ಲಿ ಬಿರ್ಮನ ಹೆಸರು ಕೇವಲ ಅರಮನೆಯ ಆಡಳಿತಗಾರ ಅಜ್ಜನಿಗೆ ಮಾತ್ರ ಸಂಬಂಧಪಟ್ಟದ್ದಲ್ಲ. ಆ ಹೆಸರು ಎಂಬುದು ತುಳುನಾಡಿನ ಆದಿದೈವದ ಹೆಸರು. ತುಳುನಾಡಿನ ಆರಂಭ ಕಾಲದಿಂದಲೂ ಇದ್ದ ಹೆಸರು ಎಂಬುದು ಇದರ ಬಾವಾರ್ಥ. ತುಳುನಾಡಿನಲ್ಲಿ ಬೀರ, ಬೀರು, ಬಿರ್ಮ ಇತ್ಯಾದಿ ಹೆಸರುಗಳುಳ್ಳ ಬಹಳಷ್ಟು ಜನರಿದ್ದರು.[೯]

ಸಿರಿ ಪಾಡ್ದನದ ಕತೆಯಲ್ಲಿ ಮೂಲಪುರುಷ ಬಿರುಮಾಳ್ವ ವೃದ್ಧಾಪ್ಯ ಮುಟ್ಟುತ್ತಾನೆ. ಆ ಹೊತ್ತಿಗೆ ಆತ ತನ್ನ ಕುಲದೇವರಾದ ಬಿರ್ಮನನ್ನು ಸ್ಮರಿಸಿಕೊಳ್ಳುತ್ತಾನೆ. ಬೆರ್ಮನು ಬ್ರಾಹ್ಮಣ ವೇಷದಲ್ಲಿ ಆಳ್ವನ ಅರಮನೆಯ ಮುಂದೆ ಬಂದು ನಿಲ್ಲುತ್ತಾನೆ. ಬ್ರಾಹ್ಮಣನ ರೂಪ ತಾಳಿ ಬಂದ ಬೆರ್ಮ ಬಿರುಮಾಳ್ವನಿಗೆ ಅಭಯ ನೀಡುತ್ತಾನೆ. ಇಷ್ಟು ಕೇಳಿದ ಬಿರುಮಾಳ್ವ ಅರಮನೆಯೊಳಗೆ ಹೋಗಿ ಕಲ್ಲ ಪತ್ತಾಯದ ಬಾಗಿಲು ತೆಗೆದು ಅಜ್ಜರು ಬಂಗಾರದ ಹರಿವಾಣ ಹಿಡಿದುಕೊಂಡು ಒಂದು ಸೇರು ಬೆಳ್ತಿಗೆ ಅಕ್ಕಿ ತೆಗೆದರು. ಜುಟ್ಟು ಇರುವ ಒಂದು ತೆಂಗಿನಕಾಯಿ ತೆಗೆದರು ಹರಿವಾಣದಲ್ಲಿಟ್ಟ ಅದರಲೊಂದು ಮುದ್ರೆಯ ನಾಣ್ಯವಿಟ್ಟರು. ಆ ಹರಿವಾಣವನ್ನು ಎರಡು ಕೈಯಲ್ಲಿ ಹಿಡಿದುಕೊಂಡು ಅಂಗಳದ ಮಧ್ಯೆ ಬಂದರು. ಹರಿವಾಣದಲ್ಲಿ ತಂದ ವಸ್ತುಗಳನ್ನು ಬ್ರಾಹ್ಮಣನಿಗೆ ದಾನ ಮಾಡಿದರು. ಬ್ರಾಹ್ಮಣ ಅದನ್ನು ಪಡೆದು ತನ್ನ ಜೋಳಿಗೆಯನ್ನು ಹಾಕಿಕೊಂಡನು. ಜೋಳಿಗೆಯಿಂದ ಒಂದು ಹಾಳೆ ಪಿಂಗಾರ ತೆಗೆದನು. ಬೊಟ್ಟು ಹಾಕುವಷ್ಟು ಗಂಧದ ಗುಳಿಗೆ, ಅರಶಿನ ಹುಡಿ ತೆಗೆದನು ಹಿರಿಯ ಕುಲದ ಬಿರುಮಾಳ್ವರಿಗೆ ಬಂಗಾರದ ಹರಿವಾಣದಲ್ಲಿ ಅದನ್ನು ಹಾಕಿಕೊಟ್ಟನು.

ಹೀಗೆ ಬ್ರಾಹ್ಮಣನಿಂದ ಪಡೆದ ಪಿಂಗಾರದ ಹಾಳೆಯಿಂದ ಬೆರ್ಮ ದೇವರ ಸಿರಿಪಾದದಿಂದ ಪಿಂಗಾರದ ಪಾಳೆ ಒಡೆದು ಅದರ ಮೇಲಿಟ್ಟಿದ್ದ ಗಂಧದ ಉಂಡೆಯಿಂದ ಹೆಣ್ಣು ಮಗುವೊಂದು ಜನಿಸಿತು. ಆ ಹುಡುಗಿಗೆ ಅಜ್ಜರು 'ಸಿರಿ' ಎಂಬ ನಾಮಕರಣ ಮಾಡಿದರು.[೧೦]

ಸಿರಿಯು ಬೆರ್ಮರು ನೀಡಿದ ಮಗು. ಸತ್ಯದಲ್ಲಿ ಉದ್ಭವಗೊಂಡ ಮಗು ಮುಂದೆ ಬೆಳೆದು ದೊಡ್ಡವಳಾಗಿ ಕಾರಣಿಕದ ಹೆಣ್ಣಾಗಿ ತುಳುನಾಡಿನ ಕೀರ್ತಿಯನ್ನು ಬೆಳಗಿದವಳು ಈ ಪಾಡ್ದನದಿಂದ ಪ್ರಾಚೀನ ಕಾಲದ ತುಳುನಾಡು ಜನರಿಗೆ ಬೆರ್ಮರೇ ಪ್ರಧಾನ ದೇವರಾಗಿದ್ದರು ಎಂಬುದು ಸ್ಪಷ್ಟವಾಗಿರುತ್ತಾನೆ ನಾಗ ಬೆರ್ಮರೇ ತುಳುನಾಡಿನ ಮೂಲದೈವ ಎನ್ನುವುದಕ್ಕೆ ಯಾವುದೇ ಸಂಶಯವಿಲ್ಲ. ಏಕೆಂದರೆ ತುಳುನಾಡಿನ ಜನಪದರು ಸಾಮಾಜಿಕ ಚಳುವಳಿಗೆ ನಾಗ ಬೆರ್ಮರೆ ಪ್ರಮುಖವಾದ ಆರಾಧನೆ ದೈವವಾಗಿದೆ.[೧೧]

ಬಡಗು ಗಂಗೆಯಿಂದ ತೆಂಕ ರಾಮೇಶ್ವರದವರೆಗೆ ಅರಸು ದೈವ ಬೆರ್ಮರ ತನ್ನ ಅಧಿಕಾರ ವ್ಯಾಪ್ತಿಯನ್ನು ಹೊಂದಿದ್ದರೆ ಎಂಬ ಉಲ್ಲೇಖ ಲೆಕ್ಕೆಸಿರಿ ಪಾಡ್ದನದಲ್ಲಿದೆ. ಇಡಿ ಭರತ ಖಂಡದಲ್ಲೆಲ್ಲಾ ಈ ಬೆರ್ಮರು ಆರಾಧನೆಗೆ ಒಳಗಾಗಿದ್ದರು ಎಂಬುದು ಇದ್ದರಿಂದ ವ್ಯಕ್ತವಾಗಿರುತ್ತದೆ. ಬೆರ್ಮರ ಆರಾಧನೆಗೆ ಒಳಗಾಗಿದ್ದರು ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಬೆರ್ಮರ ಆರಾಧನಾ ಕೇಂದ್ರಗಳನ್ನು ಅಲಡೆಗಳೆನ್ನುತ್ತಾರೆ. ನಾಗ ಬೆರ್ಮ ಪ್ರಧಾನ ದೈವವಾದರೆ ನಾಗ ನಂದಿಗೋಣ, ಲೆಕ್ಕೆ ಸಿರಿ ಕ್ಷೇತ್ರಪಾಲ ಮತ್ತು ಸಿರಿಯ ಬಳಗದವರು ಪರಿವಾರ ದೈವಗಳಾಗಿರುತ್ತಾರೆ.(೧೨)

ಮಂಗಳೂರುದ್ದು ಬಾರ್ಕೂರು ಮುಟ್ಟ ಬಾರ್ಕೂರುದ್ದು ಮಂಗಳೂರು ಮುಟ್ಟ ಅಡ್ಡ ಲೆಕ್ಕೆ ಸಿರಿ–ನೀಟ ಬೆರ್ಮರ್, ನೀರ್‌ದ್ ಕನ್ಸೆಲು ಉದ್ಯ ಬೆಂದೆರ್ ವಿಜಯನಗರದ ಅರಸು ತುಳುನಾಡನ್ನು ಆಳುತ್ತಿದ್ದ ಕಾಲದಲ್ಲಿ ಮಂಗಳೂರು ರಾಜ್ಯ ಮತ್ತು ಬಾರ್ಕೂರು ರಾಜ್ಯವೆಂಬುದಾಗಿ ಎರಡು ವಿಭಾಗವಾಗಿತ್ತು. ಈ ಎರಡು ರಾಜ್ಯಗಳ ಮಧ್ಯೆ ಭಾವನಾತ್ಮಕವಾಗಿ ಸಂಬಂಧ ಉಳಿಯಿತು. ಬೆರ್ಮರು, ಲೆಕ್ಕೆಸಿರಿ ಮತ್ತು ಯಕ್ಷಿಣಿಯರೇ ಕಾರಣ. ತುಳುನಾಡಿನಲ್ಲಿ ಹಿಂದೆ ಯಕ್ಷಾರಾಧನೆ ಅತ್ಯಂತ ಹೆಚ್ಚು ಪ್ರಚಾರದಲ್ಲಿತ್ತು ಎಂಬುದನ್ನು ಈ ಮಾತು ಸೂಚಿಸುತ್ತದೆ. ಬೆರ್ಮರು ಯಕ್ಷರಾಜನಾದರೆ ಲೆಕೆಸಿರಿ ಯಕ್ಷರಿಗೆಲ್ಲ ತಾಯಿ ಉಳಿದಂತೆ ಯಕ್ಷ ಕನ್ನಿಕೆಯರು ಅವರ ಪರಿವಾರಕ್ಕೆ ಸೇರಿದವರು. ಯಕ್ಷಾರಾಧನೆ ತುಳುನಾಡಿನ ಜನರ ಜೀವನದಲ್ಲಿ ಹಾಸು ಹೊಕ್ಕಾಗಿತ್ತು. ಇದು ತುಳುನಾಡಿನ ಜನರಲ್ಲಿ ಭಾವೈಕ್ಯತೆಯನ್ನುಂಟು ಮಾಡುವ ಮಾಧ್ಯಮವಾಗಿತ್ತು ಎಂಬುದನ್ನು ಈ ಉಲ್ಲೇಖ ಸ್ಪಷ್ಟಪಡಿಸುತ್ತಿದೆ.(೧೩)

ಶ್ರೀಮತಿ ಇಂದಿರಾ ಹೆಗ್ಗಡೆಯವರು ನಾಗಬೆರ್ಮರ ಆರಾಧನೆ ಸುಮಾರು 25 ಸ್ಥಳಗಳನ್ನು ಗುರುತಿಸಿದ್ದಾರೆ. ಕೆಲವು ಕಡೆಯಲ್ಲಿ ಬೆರ್ಮರು ನಾಗಬೆರ್ಮ ಹೆಸರಲ್ಲಿ ಆರಾಧನೆ ಗೊಳ್ಳುತ್ತದೆ. ಕೆಲವೆಡೆಯಲ್ಲಿ ಬ್ರಹ್ಮಲಿಂಗೇಶ್ವರ ಎಂಬ ಹೆಸರಿನಲ್ಲಿ ಅರ್ಧ ನಾರೀಶ್ವರನ ಹೆಸರಲ್ಲಿ, ಖಗ್ಗೇಶ್ವರ ಉಲ್ಲಾಯನೆಂದೂ ಕರೆಯುತ್ತಾರೆ. ನಾಗ ಬೆರ್ಮನು ಕಾಲಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ತನ್ನ ಹೆಸರನ್ನು ಬದಲಾಯಿಸಿಕೊಂಡು, ಜನರ, ಜನಪರರ, ತುಳುನಾಡಿನ ಜನರ ಆದಿದೈವವಾಗಿ ಆದಿದೇವನಾಗಿ ಪ್ರಚಾರ ಪಡೆಯಿತು. ನಾಗಬೆರ್ಮರ್ ಪರಿವರ್ತನೆ ಹೊಂದಿದೆ.(೧೪)

ಕೋಟಿ–ಚೆನ್ನಯ ಪಾಡ್ದನದಲ್ಲಿ ಬೆರ್ಮ ಪಾಡ್ದನದ ಮೊದಲ ಸಂಧಿಯ ಬೆರ್ಮರ ಸಂಧಿ ಈ ಕಾವ್ಯದಲ್ಲಿ ಬೆರ್ಮರು ಹೇಗೆ ಸೃಷ್ಟಿಯಾದರು ಎಂಬ ಐತಿಹ್ಯ ಇದೆ.

ಅಣಿಗಂಗೆ, ಮಣಿಗಂಗೆ ನೀರಗಂಗೆ ಪೇರಗಂಗೆ, ಉಪ್ಪಿ ನೀರಗಂಗೆ, ಹೀಗೆ ಸಪ್ತ ಸಾಗರವನ್ನು ಬೆರ್ಮರು ಸೃಷ್ಟಿಸಿದರು. ಏಳು ಕಡಲ ನಡುವೆ ಇಂಥ ಏಳು ಸುತ್ತಿನ ಕೋಟೆಯ ಮಧ್ಯಭಾಗದಲ್ಲಿ ಎದ್ದು ಕಾಣುವ ಗುಡಿಯಲ್ಲಿ ಓಲಗ ನಡೆಸಿದರು. ಮುಂದೆ. ಬೆರ್ಮರ ವರ್ಣನೆ ಇದೆ. ಪತಿಯಲ್ಲಿ ಏಳಂತರದ ಬಂಗಾರದ ಕಿರೀಟ, ಮೂರಂತರದ ಭುಜಕೀರ್ತಿ ಹೊತ್ತ ಹೆಗಲ ಬಲಭಾಗಕ್ಕೆ ಚಿನ್ನದ ಜನಿವಾರ

ಎಡಬದಿಗೆ ಬೆಳ್ಳಿಯ ಜನಿವಾರ, ಕಿವಿಗೆ ಕೇಂಜವ ಪಕ್ಷಿಯಾಕಾರದ ಓಲೆ ಎದೆಯಲ್ಲಿ ಅಮೃತ ಗಿಂಡೆ, ಕೊರಳಿನಿಂದ ಹೊಟ್ಟೆಯ ಮೇಲ್ಭಾಗದವರೆಗೆ ಮುತ್ತಿನ ಹಾರ, ಕುತ್ತಿಗೆಗೆ ಸುತ್ತಲು ವಜ್ರಾಉಕ್ಕಿನ ಹಾರಗಳು, ಹೂವಿನ ಮಾಲೆಗಳು, ಎದೆಗೆ ಭೀಮಶಕ್ತಿ, ಬೆನ್ನಿಗೆ ಅರ್ಜುನ ಶಕ್ತಿ, ಬೆನ್ನಿಗೆ ಕಟ್ಟಿದ ಬತ್ತಳಿಕೆ ಬತ್ತಳಿಕೆಯೊಳಗೆ ತೀಕ್ಷ್ಣವಾದ ಬಾನಗಳು, ಒಂದು ಕೈಯಲ್ಲಿ ಬೆಳ್ಳಿಯ ಧನಸ್ಸು, ಇನ್ನೊಂದು ಕೈಯಲ್ಲಿ ಬೆಳ್ಳಿಯ ಬೀಸಣಿಗೆ, ನಡುವಿಗೆ ಸುತ್ತು ಸರ್ವಾಭರಣ, ವಾದಕ್ಕೆ ಪಣಿಪಂಚ, ಈ ರೀತಿಯಲ್ಲಿ ವಜ್ರ ಖಚಿತ ಬೆಳ್ಳಿ ಬಂಗಾರದ ಆಭರಣಗಳಿಂದ ಅಲಂಕೃತವಾದ ಆಸನದಲ್ಲಿ ಬೆರ್ಮೆರು ಕುಳಿತು ಓಲಗ ನಡೆಸಿದರು.[೧೫]

ಕೋಟಿ–ಚೆನ್ನಯ ಪಾಡ್ದನದ ಇನ್ನೊಂದು ಸಂಧಿ ಎಕಸಾಲೆರೆ ದೆಯ್ಯಾರ ಸಂಧಿ ಈ ಮಾತು ಕೋಟಿ–ಚೆನ್ನಯರ ಕಾಲದಲ್ಲಿ ಕೆಮ್ಮಲೆ ಒಂದು ಪ್ರಸಿದ್ಧ ಕ್ಷೇತ್ರವಾಗಿತ್ತು. ಅವರು ಕೆಮ್ಮಲೆಯ ಬಿರ್ಮನ ಭಕ್ತರಾಗಿದ್ದು ಕೋಟಿ–ಚೆನ್ನಯರನ್ನು ಪಂಜದ ಬಲ್ಲಾಳನ ಮಂತ್ರಿ ಚೆಂದುಗಿಡಿ ಉಪಾಯದಿಂದ ಸೋಲಿಸಿ ಕಾರಾಗೃಹದಲ್ಲಿ ಹಾಕಿದಾಗ ಅವರು ತಮ್ಮ ಬಿಡುಗಡೆಗಾಗಿ ಕೆಮ್ಮಲೆಯ ಬೆರ್ಮನನ್ನು ಪ್ರಾರ್ಥಿಸಿಕೊಳ್ಳುವ ಉಲ್ಲೇಖ ಪಾಡ್ದನದಲ್ಲಿದೆ.[೧೬]



ಗರಡಿಗಳಲ್ಲಿ 1/3 ಭಾಗದಷ್ಟು ಭಾಗದಲ್ಲಿ ಬಿರ್ಮರ ಗುಂಡ ಇರುತ್ತದೆ. ಈ ಗುಡಿಯಲ್ಲಿ ಬಿರ್ಮರ ಮೂರ್ತಿಯನ್ನು ಶಾಸ್ತ್ರೋಕ್ತವಾಗಿ ಪ್ರತಿಷ್ಠಾಪಿಸಲಾಗುತ್ತದೆ. ಗುಂಡದ ಹೊರಗೆ ಕೋಟಿ ಚೆನ್ನಯರ ಮೂರ್ತಿಗಳಿರುತ್ತದೆ.

ತುಳುನಾಡಿನಲ್ಲಿ ಸಾಂಸ್ಕೃತಿಕ ವೀರರೆಂದೆಣಿಸಿದ ಕೋಟಿ–ಚೆನ್ನಯರು ಬಿರ್ಮರ ಭಕ್ತರಾಗಿದ್ದರು ಎಂಬ ಬಗ್ಗೆ ಪಾಡ್ದನಗಳಲ್ಲಿ ಉಲ್ಲೇಖಗಳಿವೆ. ಈಗಲೂ ಗರಡಿಗಳಲ್ಲಿ ಬಿರ್ಮನ ಭಕ್ತರ ಆರಾಧ್ಯದೇವನಾಗಿದ್ದಾನೆ. ಈ ದೇವರ ಮೂರ್ತಿಗಳೆಲ್ಲ ಕುದುರೆಯ ಮೇಲೆ ಕುಳಿತ ಪುರುಷಾಕೃತಿಗಳಾಗಿವೆ. ಇಟೇಲಿಯನ್ ಪ್ರವಾಸಿ ದಲೆವೆಲ್ಲೆ ಕ್ರಿ.ಶ 1623ರಲ್ಲಿ ಉಳ್ಳಾಲದ ರಾಣಿ ಅಬ್ಬಕ್ಕನ ರಾಜ್ಯಕ್ಕೆ ಬೇಟಿ ನೀಡಿದಾಗ ಆ ಪ್ರದೇಶದಲ್ಲಿ ಒಂದು ಚಿಕ್ಕ ಗುಡಿಯಲ್ಲಿ ಇಂಥದ್ದೇ ಬೆರ್ಮನ ಮೂರ್ತಿಯನ್ನು ನೋಡಿರುವುದಾಗಿ ಬರೆದಿದ್ದಾನೆ. ಶಿವ ಮತ್ತು ದುರ್ಗೆ ಆರಾದ್ಯ ದೇವರಾಗಿ ತುಳುನಾಡಿನಲ್ಲಿ ಪ್ರಸಿದ್ದಿಗೆ ಬಂದಾಗ ಬೆರ್ಮೆ ನಿಧಾನವಾಗಿ ಕಣ್ಮರೆಯಾಗುತ್ತಾ ಬಂದ ಮುಂದೆ ಬೆರ್ಮನ ಹೆಸರು ನಾಗ ಬೆರ್ಮೆರ್ ಎಂಬುದಾಗಿ ವಿಸ್ತರಿಸಲ್ಪಟ್ಟಿತು. ಈ ಪ್ರಕಾರವಾಗಿ ಚರ್ಚಿಸುತ್ತಾ ಹೋದಾಗ ನಾಗ ಬ್ರಹ್ಮನು ಈಗಲೂ ತುಳುನಾಡಿನ ಜನರಿಗೆ ಆರಾಧ್ಯ ದೈವವಾಗಿದ್ದಾನೆ ಎಂದು ತಿಳಿದು ಬರುತ್ತದೆ.[೧೭]



ಬೈಲಡ್ಕ ಗರೊಡಿ - ಕುಂದಾಪುರ ತಾಲೂಕು



ಆಸೋಡ್ ಗರೊಡಿ - ಕುಂದಾಪುರ ತಾಲೂಕು



ಅರ್ಧಮಾನವ ರೂಪಿ ನಾಗಬ್ರಹ್ಮ



ಲೆಕ್ಕೆಸಿರಿ (ರಕ್ತೇಶ್ವರಿ)



## ಸಂದರ್ಭ ಸೂಚಿ


೧. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ನಾಗಬೆರ್ಮೆ – ಪುಟ ೭೩.

೨. ಅದೇ ಪುಟ – ೭೩

೩. ಅದೇ ಪುಟ – ೭೪

೪. ಹಂಪ ನಾಗರಜಯ್ಯ, ಯಕ್ಷ, ಯಕ್ಷಿಣಿಯರು ಪುಟ – ೧೦೫

೫. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ – ನಾಗ ಬೆರ್ಮೆ ಪುಟ – ೭೪

೬. ಅದೇ ಪುಟ – ೭೫

೭. ಅದೇ ಪುಟ – ೮೧

೮. ಅದೇ ಪುಟ – ೮೨

೯. ಅಮೃತ ಸೋಮೇಶ್ವರ – ೨೦೦೦ – ಪುಟ – ೧೫೩

೧೦. ಡಾ. ಪಾಲ್ತಾಡಿ ರಾಮಕೃಷ್ಣ ಅಚಾರ್ – ನಾಗಬೆರ್ಮೆ – ಪುಟ ೮೨

೧೧. ಅದೇ ಪುಟ – ೮೩

೧೨. ಡಾ॥ ಇಂದಿರಾ ಹೆಗ್ಗಡೆ ತುಳುವರ ಮೂಲತಾನ ಆದಿ ಆಲಡೆ ಪರಂಪರೆ ಮತ್ತು ಪರಿವರ್ತನೆ ಪುಟ–೨೦

೧೩. ಡಾ. ಪಾಲ್ತಾಡಿ ರಾಮಕೃಷ್ಣ ಅಚಾರ್, ನಾಗಬೆರ್ಮೆ, ಪುಟ – ೯೧.

೧೪. ಡಾ॥ ಇಂದಿರಾ ಹೆಗ್ಗಡೆ, ತುಳುವರ ಮೂಲತಾನ ಆದಿ–ಆಲಡೆ ಪರಂಪರೆ ಮತ್ತು ಪರಿವರ್ತನೆ ಪುಟ – ೧೨೮

೧೫. ವಾಮನ ನಂದಾವರ ಕೋಟಿ ಚೆನ್ನಯ ಜಾನಪದೀಯ ಅಧ್ಯಯನ ಪುಟ – ೧೮೭

೧೬. ಅದೇ ಪುಟ – ೧೮೭

೧೭ ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ನಾಗಬೆರ್ಮೆ ಪುಟ – ೯೯.


**********

# ಉಪಸಂಹಾರ

ಈ ಆಧ್ಯಯನದಲ್ಲಿ ಮೊದಲು ಜನಪ್ರಿಯವಾಗಿದ್ದ ಬೆರ್ಮರ ಆರಾಧನೆಯು ಬಳಿಕ ಹಲವು ದೇವರುಗಳ ಉಪನಂಬಿಕೆಯೊಂದಿಗೆ ಸೇರಿಕೊಂಡಿದೆ. ತುಳುವರ ಪ್ರಾಚೀನ ಆರಾಧ್ಯ ದೈವ "ಬೆರ್ಮೆ ಈಗ ಬರಿಯ ಬೆರ್ಮೆ ಅಲ್ಲ. ಆತ ನಾಗಬೆರ್ಮನಾಗಿ ಕಂಡು ಬರುತ್ತಾನೆ.

ಅನಾದಿ ಕಾಲದಿಂದಲೂ ತುಳುನಾಡಿನ ಜನರು ನಂಬಿಕೊಂಡು ಬಂದಿರುವ ದೈವವೆಂದರೆ. ಬಿರ್ಮೆರ್, ಬೆರ್ಮೆರ್, ತುಳುನಾಡಿನ ಅನೇಕ ಕಡೆ ಬೆರ್ಮೆರಿಗೆ ಗುಡಿ ಆಲಯಗಳಿವೆ. ತುಳು ಜಾನಪದದಲ್ಲಿ ಪಾಡ್ದನಗಳಲ್ಲಿ ದೈವದ ಕುರಿತು ಉಲ್ಲೇಖಿಸಲಾಗಿದೆ. ತುಳು ಮೌಖಿಕ ಮಹಾಕಾವ್ಯಗಳಲ್ಲಿ ಪ್ರಮುಖವಾಗಿ ಅಕ್ಕೆರಸು ಸಿರಿ ಮತ್ತು ಕೋಟಿ–ಚೆನ್ನಯ ಪಾಡ್ದನಗಳನ್ನು ಬೆರ್ಮನ ಕುರಿತು ವಿಶೇಷ ಮಾಹಿತಿಗಳು ದೊರೆಯುತ್ತವೆ. ಇದರಲ್ಲಿ ತುಳುನಾಡಿನ ಜನ. ಭೂತಾರಾಧನೆಗೆ ಪ್ರಸಿದ್ಧಿ ಪಡೆದ್ದರಿಂದ ಜನರು ಸಾಮಾನ್ಯವಾಗಿ ಬೆರ್ಮನನ್ನು ಒಂದು ಭೂತವೆಂದೇ ಪರಿಗಣಿಸಿದ್ದಾರೆ. ಪ್ರಮುಖವಾಗಿ ಬೆರ್ಮನು ಭೂತಗಳಿಗೆ ಒಡೆಯನಾಗಿ ಕಂಡು ಬರುತ್ತಾನೆ. ಹಿಂದಿನ ಕಾಲದ ಮೂಲದಲ್ಲಿ ಯಾವುದೇ ರೀತಿಯಲ್ಲಿ ಬೆರ್ಮನಿ ಕೋಲ ನಡೆಸುವ ಪದ್ಧತಿ ಇದ್ದಿರಲಿಲ್ಲ. ಆದರೆ ಇತ್ತೀಚೆಗೆ ಬೆರ್ಮನನ್ನು ನಾಗನೊಂದಿಗೆ ಸಮೀಕರಿಸಿ ನಾಗಬೆರ್ಮನಿಗೆ ಕೋಲವನ್ನು ನಡೆಸಲಾಗುತ್ತಿದೆ. ಅದೇ ರೀತಿಯಲ್ಲಿ ತುಳುನಾಡಿನ ಅಲಡೆಗಳ ಪ್ರಧಾನ ಆದ ನಾಗಬೆರ್ಮೆ 'ಬೆರ್ಮೆರ್' ರೂಪದಲ್ಲಿ ಆರಾಧಿಸುವುದಿಲ್ಲ. ಆರ್ಧನಾರೀಶ್ವರ, ಬ್ರಹ್ಮಲಿಂಗೇಶ್ವರ, ಮಹಾಲಿಂಗೇಶ್ವರ, ಖಿಗ್ಗೇಶ್ವರ, ಇತ್ಯಾದಿ ಹೆಸರುಗಳಲ್ಲಿ ಆರಾಧನೆ ನಡೆಯುತ್ತಿದೆ. ತುಳುನಾಡಿನಲ್ಲಿ ದೈವಾರಾಧನೆ ಪ್ರಭಾವದಿಂದ ದೈವಗಳನ್ನು ಶಿವನ ರೂಪವೆಂದು ಪರಿಗಣಿಸಿರಬೇಕು. ಬೆರ್ಮನನ್ನು ಶಿವನ ಅವತಾರವೆಂದು ಅಲಡೆಗಳಲ್ಲಿ ಪೂಜೆ ಸಲ್ಲಿಸುತ್ತಿದ್ದಾರೆ. ಇನ್ನೂ ಕೆಲವಡೆ ಬೆರ್ಮೆರನ್ನು ಮಣ್ಣಿನ ಕಲಶದ ರೂಪದಲ್ಲಿ ಆರಾಧಿಸುತ್ತಾರೆ. ಕಾವ್ಯನಾಟದಲ್ಲಿಯೂ ಮಣ್ಣಿನ ಮಡಿಕೆಯನ್ನು ಬೆರ್ಮೆರ್ ಎಂದು ಆರಾಧಿಸುತ್ತಾರೆ. ಮಣ್ಣಿನ ದೊಡ್ಡದಾದ ಮಡಿಕೆಗೆ ತುಳುವಿನಲ್ಲಿ ಕಟ್ಟ ಎನ್ನುತ್ತಾರೆ. ಕೆಲವೆಡೆ ಬೆರ್ಮೆರನ್ನು 'ಸ್ವಾಮಿ' ಎಂದೂ ಆರಾಧಿಸುವ ಪದ್ಧತಿ ಇದೆ. ಇದೇ ರೀತಿಯನ್ನು ನಾಗಬ್ರಹ್ಮರ್ ಆರಾಧನಾ ವಿಧಾನದಲ್ಲಿ ಕಾಲಕ್ಕೆ ಅನುಗುಣವಾಗಿ ಹೆಸರುಗಳು ರೂಪಗಳು ಬದಲಾವಣೆ ಹೊಂದುವಂತೆ ಆಯಿತೆಂದು ತಿಳಿಯಬಹುದು.

ತುಳುವರ ನಾಗ ಬೆರ್ಮೆರ್ ಮತ್ತು ಅವನ ಪರ್ಯಾಯ ಶಕ್ತಿಗಳೆಂದರೆ ಅರಸು ದೈವ ಉಲ್ಲಾಯ, ಉಲ್ಲಾಕುಲ ಮತ್ತು ರೆಕ್ಕೆಸಿರಿ.

ದೈವ ಮುನಿಸಿದ ಪರಿಣಾಮ ಕಷ್ಟನಷ್ಟಗಳನ್ನು ಅನುಭವಿಸುವ ಈ ಶಿಕ್ಷೆಯನ್ನು ಈ ಜನ್ಮದಲ್ಲಿ ದೊರೆಯಬಹುದು. ಶಕ್ತಿಗೆ ಹೆದರಿ ಆತ ಸನ್ಮಾರ್ಗದಲ್ಲಿ ನಡೆಯುತ್ತಿರ್ದ್ದಾನೆ. ಅದೇ ರೀತಿಯಲ್ಲಿ ತುಳುನಾಡಿನ ಅಲಡೆಗಳ ಪ್ರಧಾನ ಆದ ನಾಗಬೆರ್ಮೆ 'ಬೆರ್ಮೆರ್' ರೂಪದಲ್ಲಿ ಆರಾಧಿಸುವುದಿಲ್ಲ ಎಂಬುವುದು

ಗಮನಿಸತಕ್ಕ ವಿಚಾರ. ಅರ್ಧನಾರೀಶ್ವರ, ಬ್ರಹ್ಮಲಿಂಗೇಶ್ವರ, ಮಹಾಲಿಂಗೇಶ್ವರ ಖಿಗ್ಗೇಶ್ವರ, ಖಿಗ್ಗೇಶ್ವರಿ ಇತ್ಯಾದಿ ಹೆಸರುಗಳಲ್ಲಿ ಆರಾಧನೆ ನಡೆಯುತ್ತಿದೆ. ತುಳುನಾಡಿನಲ್ಲಿ ದೈವಾರಾಧನೆ ಪ್ರಭಾವದಿಂದ ದೈವಗಳನ್ನು ಶಿವನ ರೂಪವೆಂದು ಪರಿಗಣಿಸಿರಬೇಕು. ಬೆರ್ಮರನ್ನು ಶಿವನ ಅವತಾರವೆಂದು ಅಲಡೆಗಳಲ್ಲಿ ಪೂಜೆ ಸಲ್ಲಿಸುತ್ತಿದ್ದಾರೆ. ಇನ್ನು ಕೆಲವಡೆ ಬೆರ್ಮರನ್ನು ಮಣ್ಣಿನ ಕಲಶದ ರೂಪದಲ್ಲಿ ಆರಾಧಿಸುತ್ತಾರೆ. ಕಾಡ್ದನಾಟದಲ್ಲಿಯೂ ಮಣ್ಣಿನ ಮಡಿಕೆಯನ್ನು ಬೆರ್ಮರ್ ಎಂದು ಆರಾಧಿಸುತ್ತಾರೆ. ಮಣ್ಣಿನ ದೊಡ್ಡದಾದ ಮಡಿಕೆಗೆ ತುಳುವಿನಲ್ಲಿ ಕಡ್ಡ ಎನ್ನುತ್ತಾರೆ. ಕೆಲವು ಕಡೆ ಬೆರ್ಮರನ್ನು 'ಸ್ವಾಮಿ' ಎಂದೂ ಆರಾಧಿಸುವ ಪದ್ಧತಿ ಇದೆ. ಇದೇ ರೀತಿಯಲ್ಲಿ ನಾಗಬ್ರಹ್ಮರ್ ಆರಾಧನ ವಿಧಾನದಲ್ಲಿ ಕಾಲಕ್ಕೆ ಅನುಗುಣವಾಗಿ ಹೆಸರುಗಳು ರೂಪಗಳು ಬದಲಾವಣೆ ಹೊಂದುವಂತೆ ಆಯಿತು.

ತುಳುವರ ನಾಗ ಬೆರ್ಮರ್ ಮತ್ತು ಅವನ ಪರ್ಯಾಯ ಶಕ್ತಿಗಳೆಂದರೆ ಅರಸು ದೈವ ಉಲ್ಲಾಯ, ಉಲ್ಲಾಕುಲು ಮತ್ತು ಲೆಕ್ಕೆಸಿರಿ.

ದೈವ ಮುನಿಸಿನ ಪರಿಣಾಮ ಕಷ್ಟನಷ್ಟಗಳನ್ನೂ ಅನುಭವಿಸುವ ಶಿಕ್ಷೆತಯನ್ನು ಈ ಜನ್ಮದಲ್ಲಿ ದೊರಕಬಹುದು. ಶಕ್ತಿಗೆ ಹೆದರಿ ಆತ ಸನ್ಮಾರ್ಗದಲ್ಲಿ ನಡೆಯಲು ಈ ವ್ಯವಸ್ಥೆ ಅನುವು ಮಾಡುತ್ತಿದೆ. ಇಲ್ಲಿಯೂ ಕೂಡಾ ತಪ್ಪಿತಸ್ಥರನ್ನು ಅವರು ಸಾಯುವ ಮೊದಲು ಶಿಕ್ಷಿಸುವ ಸಂದೇಶವನ್ನು ನೀಡುತ್ತದೆ. ತುಳುನಾಡ ಸಿರಿ, ದೇವುಪೂಂಜ, ಮುಂತಾದ ಪಾಡ್ದನಗಳು ಮನುಷ್ಯ ಮಾಡುವ ತಪ್ಪಿಗೆ ಶಿಕಷೆಯನ್ನು ಅನುಭವಿಸಿಯೇ ಸಾಯುವ ದೃಶ್ಯಗಳನ್ನು ನೀಡುತ್ತೇವೆ.

ತುಳುವರ ನಂಬಿಕೆಯಂತೆ ಮನುಷ್ಯ ಸತ್ತರೆ, ತನ್ನ ಮಾತೃ ಕುಟುಂಬದ ಹಿರಿಯರು ಸತ್ತಮೇಲೆ ಸೇರಿಸುವ ಮೂಲತಾನದ ಬೆರ್ಮರ ಬಳಿ ಸಾಯುಜ್ಯ ಪಡೆಯುತ್ತಾನೆ. ತುಳುವರ ಹುಟ್ಟಿನ ಮೂಲವೇ ಬಿರ್ಮೆರ ತಾನ, ಸಾವಿನ ನಂತರ ಸೇರುವುದು ನಾಗಬೆರ್ಮರ ತಾನದಲ್ಲಿ.

ಪ್ರಮುಖವಾಗಿ ಇತ್ತೀಚಿನ ಬೆಳವಣಿಗೆಯಿಂದ ಧರ್ಮವು ನಂಬಿಕೆ ಮತ್ತು ಆಚರಣೆಗಳ ಒಂದು ಏಕೀಕೃತ ವ್ಯವಸ್ಥೆಯಾಗಿದ್ದು ಅದು ಅನೇಕ ರೀತಿಯ ಪವಿತ್ರ ವಿಷಯಗಳಿಗೆ ಸಂಬಂಧಿಸಿದ ಧರ್ಮವು ಅಗೋಚರ ಶಕ್ತಿಗಳ ಮೇಲೆ ಇರುವ ನಂಬಿಕೆ ಇದು. ಎಲ್ಲ ಧರ್ಮಗಳಿಗೂ ಅನ್ವಯಿಸುವ ಮಾತು ಅಗೋಚರ ಶಕ್ತಿಗಳನ್ನು ಆರಾಧಿಸುತ್ತಿರುವ ತುಳು ಜನಪದ ಧರ್ಮದ ಮೂಲತಾನ. ಯಾವುದೇ ಮತ ಧರ್ಮಕ್ಕೆ ಸಂಬಂಧಿಸದೇ ಕೃಷಿ ಸಂಸ್ಕೃತಿಗೆ ಸಂಬಂಧಿಸಿದ ಪಾಡ್ದನಗಳ ನಾಯಕನಾಗಿ ದೇವರೇ ಇರಲಿ ದೈವಗಳೇ ಇರಲಿ ಆತನನ್ನು ಬೇಸಾಯಗಾರನ್ನಾಗಿ ಚಿತ್ರಿಸಿದೆ. ಕಾಡಿನ ರಕ್ಷಕನಿಗೆ ಗಮನ ನೀಡಲಾಗಿದೆ. ನಾಗಶಿಲ್ಪಗಲ ನಾಗಬೆರ್ಮರ ಕಾಡನ್ನು ಕಡಿಯಲು ನಿಷೇದ ಇದೆ.

ಅಷ್ಟಮಂಗಳ ಪ್ರಶ್ನೆ ಎಂಬ ಪದ್ಧತಿ ಇರದಿದ್ದರೆ ಕನಿಷ್ಠ ಆದರೂ ಮೂಲ ತಾನದ ಕಾಡುಗಳಿಂದ ಉಳಿಯುತ್ತಿದ್ದವು. ನಿರಾಕಾರ ನಿರ್ಗುಣ ಸ್ವರೂಪದ ಬಿರ್ಮೆರ್, ನಾಗಬೆರ್ಮರ್ ಹಾಗೂ ಪರಿವಾರ

ದೈವಗಳ ಭಕ್ತರ ಭಾವನೆಗೆ ತಕ್ಕಂತೆ ಸಾಕಾರ ಸಗುಣ ರೂಪಿಯಾಗಿ ಬದಲಾವಣೆಗೊಳ್ಳುತ್ತಿರುವುದನ್ನು ನಾವು ಕಾಣಬಹುದು ಅಮೂರ್ತತೆಯಿಂದ ಮೂರ್ತತೆಗೆ.

ಬ್ರಾಹ್ಮಣ ಆರ್ಚಕರು ಮತ್ತು ಅಷ್ಟಮಂಗಳ ಪ್ರಶ್ನೆಯ ಪುದುವಾಲರ ಹೇಳಿಕೆಗಳು ಜನಪದದಲ್ಲಿ ಗೊಂದಲ ಸೃಷ್ಟಿಸುತ್ತಿದೆ. ಉದಾಹರಣೆಗೆ ದಕ್ಕೆಬಲಿ 'ವೈದ್ಯರು ಪ್ರಕರಣ ಶಿವನಿಂದ ಶಕ್ತಿಗೊಳಗಾಗಿ ಪಾತಾಳ ಸೇರುವ 'ಕಪಾಲ ಬ್ರಹ್ಮನ'ನ್ನು ಹೆಸರಿಸುತ್ತಾರೆ.

ಜನಪದದ ಬದುಕನ್ನು ಬಂಡವಾಳವಾಗಿಟ್ಟುಕೊಂಡು ಮೇಲ್ವರ್ಗದ ಜನರ ಜನಪದ ಆಭರಣಗಳಲ್ಲಿ ಹಸ್ತಕ್ಷೇಪ ಮಾಡಿದರು. ತಮ್ಮ ಪಾವಿತ್ರ್ಯಕ್ಕೆ ದಕ್ಕೆ ಬಾರದ ರೀತಿಯಲ್ಲಿ ದೈವವನ್ನು ದೇವರೊಡನೆ ಸಮೀಕರಿಸುವ ಇಲ್ಲವೇ ಅಧೀನಗೊಳಿಸುವ ಪ್ರಯತಗಳೂ ನಡೆದುವು."

ಈ ರೀತಿಯಾಗಿ ಬೆರ್ಮೆ ಮತ್ತು ನಾಗರ ಸಮೀಕರಣದಿಂದ ತುಳುನಾಡಿನ ಧಾರ್ಮಿಕ ಆರಾಧನಾ ಕೇಂದ್ರಗಳಲ್ಲಿ ಬೆರ್ಮೆರು ವಿಶಿಷ್ಟ ಛಾಪನ್ನು ಮೂಡಿಸುವುದರೊಂದಿಗೆ ತನ್ನ ವೈಶಿಷ್ಟಪೂರ್ಣ ಪ್ರಭಾವನ್ನು ಇಲ್ಲಿ ಬೀರಿರುವುದು ಕಂಡು ಬರುತ್ತದೆ.

# ಅನುಬಂಧ

## ಛಾಯಾಚಿತ್ರಗಳು:


1. ತುಳುನಾಡ ಗರೋಡಿಗಳ ಸಾಂಸ್ಕೃತಿಕ ಅಧ್ಯಯನ, ಶ್ರೀ ಬ್ರಹ್ಮ ಬೈದರ್ಕಳ ಸಾಂಸ್ಕೃತಿಕ ಅಧ್ಯಯನ ಪ್ರತಿಷ್ಠಾನ (ರಿ), ಆದಿ ಉಡುಪಿ, ದಕ್ಷಿಣ ಕನ್ನಡ ಜಿಲ್ಲೆ.

2. ತುಳುವರ ಮೂಲತಾನ ಆದಿ ಅಲಡೆ, ಪರಂಪರೆ ಮತ್ತು ಪರಿವರ್ತನೆ, ನವಕರ್ನಾಟಕ ಪಬ್ಲಿಕೇಷನ್ ಲಿಮಿಟೆಡ್, ಬೆಂಗಳೂರು.

3. www.google.com

4. www.harekrsna.com


**********

# ಗ್ರಂಥ ಸೂಚಿ

1. ಪ್ರೊ. ಅಮೃತ ಸೋಮೇಶ್ವರ : ಯಕ್ಷಾಂದೋಳ – 1995, ಅಮೃತ ಸೋಮೇಶ್ವರ ಅಭಿನಂದನಾ ಸಮಿತಿ ಉಚ್ಚಿಲ.

2. ಪ್ರೊ. ಅಮೃತ ಸೋಮೇಶ್ವರ : ತುಳು ಪಾಡ್ದನ ಸಂಪುಟ – 1997, ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

3. ಪ್ರೊ. ಅಮೃತ ಸೋಮೇಶ್ವರ : ತುಳು ಜಾನಪದ ಕೆಲವು ಮುಖಗಳು – 2007, ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

4. ಪ್ರೊ.ಎ.ವಿ. ನಾವಡ, ಗಾಯತ್ರಿ ನಾವಡ : ಕಾಡ್ಯನಾಟ – ಪಠ್ಯ ಮತ್ತು ಪ್ರದರ್ಶನ – 1992, ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ.

5. ದಾಮೋದರ ಕಲ್ಮಾಡಿ (ಸಂ) : ಕೋಟಿ ಚೆನ್ನಯ ಪಾರ್ದನ ಸಂಪುಟ – 2002, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

6. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ : ತುಳುವರ ಜನಪದ ಕತೆಗಳು – 1987, ಸುಪ್ರಿಯ ಪ್ರಕಾಶನ, ಮಾಡಾವು.

7. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ : ನಾಗಬೆರ್ಮೆ – 2009, ಸುಪ್ರಿಯ ಪ್ರಕಾಶನ, ಪುತ್ತೂರು.

8. ಪೊಳಲಿ ಶೀನಪ್ಪ ಹೆಗ್ಡೆ : ಪ್ರಾಚೀನ ತುಳುನಾಡು – 1954, ದೇಶಭಕ್ತ ಎನ್.ಎಸ್. ಕಲ್ಲೆ ಶತಮಾನೋತ್ಸವ ಪ್ರತಿಷ್ಠಾನ, ಕೆದಂಬಾಡಿ

9. ಬನ್ನಂಜೆ ಬಾಬು ಅಮೀನ್ ಮತ್ತು ಮೋಹನ್ ಕೋಟ್ಯಾನ್ : ತುಳುನಾಡಿನ ಗರೊಡಿಗಳ ಸಾಂಸ್ಕೃತಿಕ ಅಧ್ಯಯನ – 1990, ಶ್ರೀ ಬಹ್ಮ ಬೈದರ್ಕಳ ಸಾಂಸ್ಕೃತಿಕ ಅಧ್ಯಯನ ಪ್ರತಿಷ್ಠಾನ (ರಿ), ಉಡುಪಿ.

10. ಇಂದಿರಾ ಹೆಗ್ಗಡೆ : ಬಂಟರು – ಒಂದು ಸಮಾಜೋ – ಸಾಂಸ್ಕೃತಿಕ ಅಧ್ಯಯನ – 2004, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

11. ಇಂದಿರಾ ಹೆಗ್ಗಡೆ : ತುಳುವರ ಮೂಲತಾನ ಆದಿ ಆಲಡೆ ಪರಂಪರೆ ಮತ್ತು ಪರಿವರ್ತನೆ – 2012, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೆಟ್ ಲಿಮಿಟೆಡ್, ಬೆಂಗಳೂರು

12. ಉಪ್ಪುಂದ ಚಂದ್ರಶೇಖರ ಹೊಳ್ಳ : ಕುಂದನಾಡು ದೇವಾಲಯ ಹಾಗೂ ಶ್ರದ್ಧಾ ಕೇಂದ್ರಗಳು – 2001, ಕುಂದ ಅಧ್ಯಯನ ಕೇಂದ್ರ, ಶಂಕರ ಕಲಾಮಂದಿರ, ಉಪ್ಪುಂದ, ಕುಂದಾಪುರ.

13. ಕಡವ ಶಂಭು ಶರ್ಮ : ತುಳು ದೇಶ ಭಾಷಾ ವಿಚಾರವು – 1970, ಕೆ.ವಿ. ಶರ್ಮ, ಪೆರ್ಲ.

**********